# ನವವಿಧಾನ

ದಿ. ಶರಚ್ಚಂದ್ರ ಚಟರ್ಜಿ

ಕನ್ನಡಿಸಿದವರು:
ಮಹಾಬಲೇಶ್ವರ ಬಂಕಿಕೊಡ್ಲ

೧೯೪೫

ಮಾರಾಟಗಾರರು:
ಸಾಹಿತ್ಯ ಭಂಡಾರ
ಹುಬ್ಬಳ್ಳಿ

# ಪ್ರಕಾಶಕರ ಮಾತು

ವಾಚಕರ ಕೈ ಸೇರುತ್ತಿರುವ ಈ 'ನವವಿಧಾನ'ವು ದಿ. ಶರಚ್ಚಂದ್ರ ಚಟರ್ಜಿಯವರ ಒಂದು ನೀಳ್ಗತೆ. ಇದನ್ನು ಕನ್ನಡಕ್ಕೆ ಅನುವಾದಿಸಿದವರು ಸ್ನೇಹಿತರಾದ ಶ್ರೀ 'ಮಹಾಬಲೇಶ್ವರ'ರು.

ನಮ್ಮ ಮೊದಲು ಪ್ರಕಟಣೆಯಾದ 'ಚಂದ್ರನಾಥ'ಕ್ಕೆ ಕನ್ನಡ ವಾಚಕರಿಂದ ದೊರೆತ ಪ್ರೋತ್ಸಾಹವೇ ಈ ಪ್ರಕಟನೆಗೆ ಕಾರಣ. ಅದರಂತೆ ಈ ಪ್ರಕಟನೆಗೂ ಪ್ರೋತ್ಸಾಹವನ್ನಿತ್ತು ಇನ್ನೂ ಹೆಚ್ಚಿನ ಪ್ರಕಾಶನ ಕಾರ್ಯಕ್ಕೆ ನಮ್ಮನ್ನು ಪ್ರೋತ್ಸಾಹಿಸುವರೆಂದು ನಂಬಿರುತ್ತೇವೆ.

ಸುಂದರವಾಗಿ ಅನುವಾದಿಸಿಕೊಟ್ಟ ಬಗೆಗೆ ಶ್ರೀ ಮಹಾಬಲೇಶ್ವರರಿಗೂ, ಈ ಪ್ರಕಟನೆಯ ಮಾರಾಟದ ಅಧಿಕಾರವನ್ನು ಪಡೆದು ಆರ್ಥಿಕ ಸಹಾಯವನ್ನಿತ್ತ ಹುಬ್ಬಳ್ಳಿಯ ಸಾಹಿತ್ಯ ಭಾಂಡಾರದ ಒಡೆಯರಿಗೂ ನಾವು ಚಿರಕೃತಜ್ಞರು. ಸುಂದರವಾಗಿ ಮುದ್ರಿಸಿಕೊಟ್ಟ 'ದೇಶಬಂಧು' ಮುದ್ರಣಾಲಯದ ಚಾಲಕರಿಗೆ ವಂದನೆಗಳು.

ಮಾರ್ಚ್ ೧೯೪೫ — ಪ್ರಕಾಶಕ.
ಬೆಂಗಳೂರು.

---

ಪ್ರಕಾಶಕರು:
ಮ. ಅನಂತಮೂರ್ತಿ
ಈಸ್ಟ್ ರೋಡು, ವಿಶ್ವೇಶ್ವರಪುರ, ಬೆಂಗಳೂರು ನಗರ.
ಮುದ್ರಕರು:
ಶ್ರೀ|| ಬಿ. ಎಸ್. ವೆಂಕಟರಾಮ್, ಪ್ರೊಪ್ರೈಟರು,
ದೇಶಬಂಧು ಪ್ರೆಸ್, ಕೋಟೆ, ಬೆಂಗಳೂರು ನಗರ.

# ನವ ವಿಧಾನ

ಇದರ ನಾಯಕ ಶೈಲೇಶ್ವರ ಘೋಷಾಲನಿಗೆ ಪತ್ನೀವಿಯೋಗವಾಗಿತ್ತು. ಕೆಲದಿನಗಳಲ್ಲಿಯೇ ಇನ್ನೊಂದು ಹೆಣ್ಣು ತರುವ ಯೋಚನೆ ಮಾಡಿದ. ಈ ಸುದ್ದಿ ಗೆಳೆಯರ ಕಿವಿಗೆ ಬೀಳಲು, ಆತನಿಗೇ ಒಂದು ತರದ ಸಂಕೋಚವೆನಿಸತೊಡಗಿತು. ಇಲ್ಲದಿದ್ದರೆ ಆತನ ಚರಿತ್ರೆಯ ದಿಶೆಯೇ ಬದಲಾಗುತ್ತಿತ್ತು. ಅದಕ್ಕಾಗಿ ಇಲ್ಲಿಯೇ ಅದನ್ನು ವಿವರಿಸುವೆ.

ಕಲಕತ್ತೆಯ ಸುಪ್ರಸಿದ್ಧ ಕಾಲೇಜೊಂದರಲ್ಲಿ ಶೈಲೇಶ್ವರ ದರ್ಶನ ಶಾಸ್ತ್ರದ ಅಧ್ಯಾಪಕ. ಇದರ ಬಗ್ಗೆ ಆತ ಇಂಗ್ಲೆಂಡಿನ ಒಂದು ಪರೀಕ್ಷೆಯಲ್ಲಿ ಉತ್ತೀರ್ಣನಾಗಿದ್ದ. ತಿಂಗಳಿಗೆ ೭-೮ ನೂರು ರೂಪಾಯಿ ಸಂಬಳ. ಮೂವತ್ತೆರಡು ವಯಸ್ಸು. ಒಂಭತ್ತು ವರ್ಷದ ಹುಡುಗನನ್ನು ಹಿಂದೆ ಬಿಟ್ಟು ಆತನ ಹೆಂಡತಿ ಐದು ತಿಂಗಳ ಮೊದಲು ಸ್ವರ್ಗಸ್ಥಳಾಗಿದ್ದಳು. ಕಲಕತ್ತೆಯ ಪಟಲಡಾಂಗಾ ಎಂಬ ಭಾಗದಲ್ಲಿಯೇ ಬಹುದಿನಗಳಿಂದಲೂ ವಾಸ್ತವ್ಯ. ಈಗ ಅಲ್ಲಿಯೇ ಒಂದು ಮನೆ ಮಾಡಿದ್ದಾರೆ. ಅಲ್ಲಿರುವವರು ಹುಡುಗ, ಅಡಿಗೆಯವ, ಕೂಲಿ ಎಲ್ಲ ಕೂಡಿ ೮-೯ ಮಂದಿ. ಒಂದು ರೀತಿಯಿಂದ ನೌಕರರದೇ ಅಲ್ಲಿ ಪ್ರಾಬಲ್ಯ. ಶೈಲೇಶ್ವರನಿಗೆ ಮೊದಲು ಮದುವೆಯಾಗುವ ಇಚ್ಛೆಯಿರಲಿಲ್ಲ. ಇದು ಸಹಜವೇ ಸರಿ. ಆ ಮೇಲೆ ಆ ಹಂಬಲ ತಲೆದೋರಿತು. ಭವಾನೀಪುರದ ಭೂಪೇಂದ್ರ ಬೆನರ್ಜಿಯ ಸುಂದರಿಯಾದ ಮಗಳು ಮೆಟ್ರಿಕ್ಕು ಪಾಸಾಗಿರುವಳೆಂಬ ಸುದ್ದಿ ಆತನ ಕಿವಿಗೆ ಬಿದ್ದಿದ್ದಿತು. ಮದುವೆಯಾಗುವವರಿರುವಲ್ಲಿ ವಧುಗಳ ವಿಷಯ ಚರ್ಚೆಯಾಗುವುದು ಅಸ್ವಾಭಾವಿಕವಾದುದೇನೂ ಅಲ್ಲ.

ಒಂದು ಸಾಯಂಕಾಲ. ಶೈಲೇಶನ ಗೆಳೆಯರೆಲ್ಲ ಕೂಡಿ ಚಹಾಪಾನ ಮಾಡುತ್ತಿದ್ದರು. ಅವರಲ್ಲಿ ಯಾವುದೋ ಶಾಲೆಯ ಪಂಡಿತನೊಬ್ಬನಿದ್ದ. ಅವನಿಗೆ ಇತರರಷ್ಟು ವೇತನವಿರಲಿಲ್ಲ. ಉಳಿದವರಷ್ಟು ಕಲಿತವನೂ ಅಲ್ಲ.

ಆದರೆ ಇತರರಿಗಿಂತ ಚಹಾ ಕುಡಿಯುವುದರಲ್ಲಿ ಮಾತ್ರ ಹಿಂದಿರಲಿಲ್ಲ. ಸ್ವಭಾವ ಸಿಡುಕಿನದು. ಗೆಳೆಯರೆಲ್ಲ "ದಿಗ್ಗಜ" ಎಂದು ಸಂಭೋಧಿಸುತ್ತಿದ್ದರು. ಎಲ್ಲಿ ಯಾವ ಮಾತಾಡಬೇಕೆಂಬ ವಿಚಾರವೇ ಆತನಿಗಿರಲಿಲ್ಲ. ದಿಗ್ಗಜ"ರಿಗೆ ಇಂಗ್ಲಿಷು ಬರುತ್ತಿರಲಿಲ್ಲ. ಕಲಿತ ` ಹುಡುಗಿಯರೆಂದರೆ ಆತನಿಗೆ ಜಿಗುಪ್ಸೆ. ಆತ ನಡುವೆಯೇ ಬಾಯಿಹಾಕಿ "ಒಬ್ಬಳನ್ನು ಹೊರಗೆ ಹಾಕಿದ. ಒಬ್ಬಳನ್ನು ಕೊಂದುಬಿಟ್ಟ. ಈಗ ಮತ್ತೆ ಮದುವೆಯ ಬಯಕೆ. ಗಾರ್ಹ್ಯಸ್ಥ ಜೀವನ ನಡಿಸುವದಾದರೆ ಉಮೇಶ ಭಟ್ಟಾಚಾರ್ಯನ ಮಗಳನ್ನೇಕೆ ಕರತರಬಾರದು? ಆಕೆ ಮಾಡಿದ ಅಪರಾಧವಾದರೂ ಯಾವುದು?" ಎಂದು ಕೇಳಿದ.

ಅಲ್ಲಿ ಕುಳಿತವರಿಗಾರಿಗೂ ಈ ಸುದ್ದಿ ಗೊತ್ತಿರಲಿಲ್ಲ. ಆದರಿಂದ ಅವರಿಗೆಲ್ಲ ಆಶ್ಚರ್ಯವಾಯಿತು. ಆತನೇ ತನ್ನ ಮಾತು ಮುಂದುವರಿಸಿದ. "ಇನ್ನೊಂದು ಲಗ್ನದ ಮಾತೆತ್ತ ಬೇಡಪ್ಪಾ! ಪಾಪ! ಆಕೆಯನ್ನೇ ಕರೆಸು. ಮೆಟ್ರಿಕ್ಕು ಪಾಸಾಗಿದ್ದಾಳೆ."

"ಆಕೆ ಹುಚ್ಚಿಯಂತೆ."

"ಎಲ್ಲರೂ ಹುಚ್ಚರೇ! ಜನರೆಲ್ಲ ನನಗೂ ಹುಚ್ಚನೆನ್ನುತ್ತಾರೆ. ಅವರ ಹೇಳಿಕೆಯಿಂದ ಆಗುತ್ತಿದ್ದರೆ" ಸಿಟ್ಟಿನಿಂದ ಮಾತು ಮುಂದುವರಿಸಲಾಗಲಿಲ್ಲ.

ಚಹಾ ಪಾರ್ಟಿಗೆ ಸೇರಿದವರೆಲ್ಲ ಬಿದ್ದು ಬಿದ್ದು ನಕ್ಕರು. ನಗೆ ಮುಗಿದೊಡನೆ ಶೈಲೇಶನು ಲಜ್ಜಿತನಾಗಿ ತನ್ನ ಕತೆ ಹೇಳಿದ. "ನನ್ನ ಜೀವನದಲ್ಲಿ ಇದೊಂದು ದುಃಖಮಯ ಘಟನೆ. ವಿಲಾಯತಿ ಹೋಗುವ ಮುಂಚೆಯೇ ನನ್ನ ವಿವಾಹವಾಗಿದ್ದಿತು. ನನ್ನ ಮಾವನಿಗೂ ತಂದೆಗೂ ವಿವಾಹ ಕಾಲದಲ್ಲಿ ತಂಟೆ ತಕರಾರು ನಡೆದಿತ್ತು. ಅದಕ್ಕಾಗಿ ತಂದೆಯು ಮನೆಯಲ್ಲಿ ಸೊಸೆಯನ್ನು ಇಟ್ಟುಕೊಳ್ಳಲಿಲ್ಲ. ಲಂಡನ್ನಿನಿಂದ ಹಿಂತಿರುಗಿದ ಮೇಲೆ ಆಕೆಯನ್ನು ಕಂಡಿಲ್ಲ."

"ಅಯ್ಯಾ, ದಿಗ್ಗಜ ಮಹಾಶಯರೇ, ಆಕೆ ಹುಚ್ಚಿಯಾಗಿರದಿದ್ದರೆ ತವರುಮನೆಯವರು ಒಮ್ಮೆಯಾದರೂ ಕಳಿಸುತ್ತಿರಲಿಲ್ಲವೇ? ಆಕೆ ಇಲ್ಲಿ ಬಂದಳೆಂದರೆ ನಿಮ್ಮ ಚಹಾಕ್ಕೂ ಸೊನ್ನೆ ಬಿದ್ದೀತು. ಗಂಗಾಜಲ ಸಿಂಪಡಿಸಿ,

ಸಗಣಿ ನೀರು ಹಾಕಿ ಹೆಜ್ಜೆಯಿಕ್ಕುವ ಸ್ವಭಾವ ಅವಳದು. ಆಕೆ ಬಂದರೆ ಚಹಾ ಸಿಗಲಿಕ್ಕಿಲ್ಲವೆಂದು ಈಗಲೇ ನೋಟೀಸು ಕೊಟ್ಟುಬಿಡುತ್ತೇನೆ."

ಈ ವಿಷಯದಲ್ಲಿ ಅವರಿಬ್ಬರ ಹೊರತು ಇನ್ನಾರೂ ಬಾಯಿ ಹಾಕಲಿಲ್ಲ. ರಾತ್ರಿಯಾದುದರಿಂದ ಅಲ್ಲಲ್ಲಿಯ ಒಂದೆರಡು ಮಾತಾಡಿ ಹೊರಟರು. ದಿನದ ವೇಳೆಗೇ ಹೊರಟಿದ್ದರೂ ದಿನದ ಉಲ್ಲಾಸವಿರಲಿಲ್ಲ. ಎಲ್ಲರ ಮೋರೆಯಲ್ಲಿಯೂ ವಿಷಾದ ಒಡೆದು ಮೂಡಿದ್ದಿತು.

## ೨.

ತನ್ನ ಮೂರನೆಯ ವಿವಾಹವನ್ನು ಯಾರೂ ಅನುಮೋದಿಸಲಿಲ್ಲವೆಂದು ಶೈಲೇಶನಿಗನ್ನಿಸಿತು. ಅವರೆಲ್ಲ ಈ ವಿಷಯದಲ್ಲಿ ಸಲಹೆ ಕೊಡದೆ ಹೋದುದು ತನ್ನ ಅಪಮಾನವೆಂದು ಭಾವಿಸಿದ. ಅವನಿಗೆ ತುಂಬ ನಾಚಿಕೆಯೆನಿಸತೊಡಗಿದ್ದರಿಂದ ಎಲ್ಲಿಯೂ ಮೋರೆ ತೋರಿಸುವುದೆಂದರೆ ಜೀವದ ಸುತ್ತು ಬಂದಂತಾಗುತ್ತಿತ್ತು.

ಮೊದಲಿನ ಮದುವೆಯಾದಾಗ ಅವನಿಗೆ ಹದಿನೆಂಟು ವರ್ಷ. ಹೆಂಡತಿ ಉಷೆಗೆ ಹನ್ನೊಂದು ವರ್ಷ. ಹುಡುಗಿ ಸುರೂಪಿಯಾದುದರಿಂದ ಕಾಲೀಪದನು ಕಡಿಮೆ ಬೆಲೆಗೇ ತನ್ನ ಮಗನನ್ನು ಮಾರಲು ಒಪ್ಪಿದ್ದ. ಶೈಲೇಶ ವಿಲಾಯತಿಗೆ ತೆರಳಿದ ಮೇಲೆ ಈ ನೆಂಟರಲ್ಲಿ ತೊಡಕೊಳ್ಳುವ ವಿಷಯದಲ್ಲಿ ಮನಸ್ತಾಪವಾಯಿತು. ಸೊಸೆಯನ್ನು ಒತ್ತಾಯದಿಂದ ತವರುಮನೆಗೆ ಕಳಿಸಿಬಿಟ್ಟ. ವಿಲಾಯತಿಯಿಂದ ಮರಳಿದ ಮೇಲೂ ಮಗನು ಹೆಂಡತಿಯನ್ನು ಕರೆಸಲು ಯತ್ನಿಸಲಿಲ್ಲ. ಆ ಇಚ್ಛೆಯಿದ್ದಂತೆಯೂ ಕಂಡುಬರಲಿಲ್ಲ. ಅತ್ತ ಉಮೇಶ ತರ್ಕಾಲಂಕಾರನೂ ಅಷ್ಟೇ ಅಭಿಮಾನಿ. ತಾನಾಗಿ ಮಗಳನ್ನು ಮಾವನ ಮನೆಗೆ ದೈನ್ಯದಿಂದ ಕಳಿಸಲು ಆತನ ಮನಸ್ಸೊಪ್ಪಲಿಲ್ಲ.

ತಂದೆ ಹಾಗೂ ಮಾವಂದಿರಲ್ಲಿ ಮನಸ್ತಾಪವಾದ ವಿಷಯ—ಹೆಂಡತಿಯನ್ನು ತವರುಮನೆಗೆ ಅಟ್ಟಿದುದು—ಇವೆಲ್ಲ ವಿಲಾಯತಿಯಲ್ಲಿಯೇ ಶೈಲೇಶನಿಗೆ ತಿಳಿದಿತ್ತು. ತಾನು ಮನೆಗೆ ಹೋದೊಡನೆಯೇ ಎಲ್ಲ ಸರಿಯಾದೀತೆಂದು ಆತ ಬಗೆದಿದ್ದ. ಆದರೆ ನಾಲ್ಕುವರ್ಷ ವಿಲಾಯತಿಯಲ್ಲಿ ಕಳೆದು

ಊರಿಗೆ ಬಂದಾಗ ಆತನಲ್ಲಿ ಒಂದು ರೀತಿಯ ಬದಲಾವಣೆ ತಲೆದೋರಿತ್ತು. ಅಲ್ಲದೆ ವಿಲಾಯತಿಯಲ್ಲುಳಿದು ಬಂದ ಸುಶಿಕ್ಷಿತನೊಬ್ಬನಿಗೆ ಕಲಿತ ಮಗಳಿರುವುದನ್ನೂ—ವಿದೇಶೀಯ ಶಿಷ್ಟಾಚಾರವನ್ನು ಆಕೆ ಅರಿತಿರುವುದನ್ನೂ ಆತ ಕೇಳಿ ತಿಳಿದಿದ್ದ. ಆಕೆಯೇ ಹೆಂಡತಿಯಾಗುವ ಯೋಗ ಕೂಡಿ ಬಂದುದರಿಂದ ಒಪ್ಪಿಗೆಯಿತ್ತ.

ಈ ಘಟನೆ ನಡೆದು ಬಹಳ ದಿನಗಳಾಗಿವೆ. ಕಾಲೀಪದ ಬಾಬು ಈಗ ಈ ಜಗತ್ತಿನಲ್ಲಿಲ್ಲ. ಆತನ ಮೊದಲಿನ ಮಾವ ತರ್ಕಾಲಂಕಾರನೂ ಸ್ವರ್ಗವಾಸಿಯಾಗಿದ್ದ. ಇಲ್ಲಿಯ ತನಕ ತರ್ಕಾಲಂಕಾರನ ಮನೆಯ ಸುದ್ದಿ ಆತನ ಕಿವಿಗೆ ಬಿದ್ದಿರಲಿಲ್ಲವೆಂದಲ್ಲ. ಉಷೆ ತನ್ನ ಸಹೋದರರ ಜೊತೆಯಲ್ಲಿದ್ದಾಳೆಂದು ಆತನಿಗೆ ಗೊತ್ತು. ಜಪ, ತಪ, ಪೂಜೆ ಪುರಸ್ಕಾರಗಳಲ್ಲಿಯೇ ಆಕೆಯ ದಿನವೆಲ್ಲ ಸಂದಾಯವಾಗುತ್ತಿತ್ತು. ಆಕೆಯ ಕರ್ಮಠ ಆಚರಣೆ ಆಕೆಯ ಅಣ್ಣತಮ್ಮಂದಿರಿಗೂ ಸೇರುತ್ತಿರಲಿಲ್ಲ. ತನ್ನ ಮನಸ್ಸಿಗೆ ಹಿತವಾಗುವಂತಹ ಸುದ್ದಿಯೊಂದೂ ಆತ ಕೇಳಿರಲಿಲ್ಲ. ಆದರೆ ಜನ ಮಾತ್ರ ಉಷೆಯ ಗುಣಗಳ ಬಗ್ಗೆ ಆಡಿಕೊಳ್ಳುವಂತಿರಲಿಲ್ಲವೆಂಬುದೊಂದೇ ಸಮಾಧಾನ.

ಶೈಲೇಶ ಇವೆಲ್ಲ ಪರಿಸ್ಥಿತಿಗಳ ಬಗ್ಗೆ ಯೋಚಿಸತೊಡಗಿ, "ಭೂಪೇಂದ್ರನ ಕಲಿತ ಕನ್ಯೆಯನ್ನು ಬಿಟ್ಟೆ ಎಂದು ತಿಳಿಯುವಾ? ಆದರೆ ಅದರಿಂದೇನಾದರೂ ಕೆಲಸವಾದೀತೆ? ಉಷೆ ಕುಸಂಸ್ಕಾರಗಳ ಮಧ್ಯದಲ್ಲಿ ಬೆಳೆದ ೨೫-೨೬ ವರ್ಷದ ಯುವತಿ. ಹಳ್ಳಿಯಲ್ಲಿ ಬೆಳೆದ ಅಶಿಕ್ಷಿತಳು. ಇಂತಹಳನ್ನು ತಂದು ನನ್ನ ಮನೆಯ ವ್ಯವಸ್ಥೆಯನ್ನೊಪ್ಪಿಸಿದರೆ ಮಂಗನ ಕೈಯಲ್ಲಿ ಮಾಣಿಕವಿತ್ತಂತಾಗದೇ? ಸೊಮೇಂದ್ರನ ಪಾಡು ನಾಯಿ ಪಾಡಾದೀತು. ಆತನ ತಾಯಿಯೇ ತನ್ನ ಸಂಕಟಕ್ಕೆಲ್ಲ ಮೂಲವೆಂದು ಬಗೆದು ಉಷೆ ಅವನನ್ನು ಹೀನಾಯವಾಗಿ ನಡೆಸಿಕೊಳ್ಳುವಳು."

ಶೈಲೇಶನ ಭಗಿನಿ ವಿಭಾ. ಆಕೆಯ ಮನೆ ಶ್ಯಾಮ ಬಾಜಾರದಲ್ಲಿ. ಆಕೆಯ ಗಂಡ ಬೆರಿಸ್ಟರ. ಸೋಮೇಂದ್ರನನ್ನು ವಿಭಾಳ ಮನೆಯಲ್ಲಿಟ್ಟರಾಯಿತೆಂದುಕೊಂಡ. ಆತ ಅತ್ತೆಯ ಜೊತೆಗೆ ಆನಂದದಿಂದಿರುವ. ಆದರೆ ಈ ವ್ಯವಸ್ಥೆ ಬಹುಕಾಲ ನಡೆಯದು. ಒಂದೆರಡು ದಿನ ಚೆಂದ. ಇವೆಲ್ಲ

ಯೋಚಿಸುತ್ತ ಹೋದಂತೆ ದಿಗ್ಗಜ ಪಂಡಿತನಿಗೆ ಹೊಡೆದುಬಿಡಲೋ ಎನ್ನುವಷ್ಟು ಕ್ರೋಧ ಬಂದುಬಿಟ್ಟಿತು. ಆತನಿಗೆ ಇಷ್ಟೊಂದು ದಿನ ಚಹಾ ಕೊಟ್ಟೆ—ಬಿಸ್ಕೀಟು ಕೊಟ್ಟೆ. ಆ ಉಪಕಾರವನ್ನೂ ಸ್ಮರಿಸಬಾರದೇ?

ಶೈಲೇಶ ಸ್ವಭಾವದಿಂದ ಕೆಟ್ಟವನಲ್ಲ. ಆದರೆ ದುರ್ಬಲ ಪ್ರಕೃತಿ ಯುವ. ತಾನು ಪಡುತ್ತಿರುವ ಸಂಕೋಚಕ್ಕಿಂತ ಪ್ರದರ್ಶಿಸುತ್ತಿರುವ ಸಂಕೋಚ ಹೆಚ್ಚು. ತಾನು ಕಲಿತವನೆಂಬ ಹೆಮ್ಮೆಯಂತೂ ಇತ್ತು. ಅಲ್ಲದೆ ಯಾರೊಡನೆಯೂ ಅನ್ಯಾಯವಾಗಿ ನಡೆದುಕೊಂಡಿಲ್ಲವಲ್ಲ ಎಂಬ ಗರ್ವ ಬೇರೆ. ಆದರೆ ಇಂದಿನ ಉಷೆಯ ಚರ್ಚೆಯಿಂದ ಗೆಳೆಯರ ಮುಂದೆ ಸಣ್ಣವನಾಗಬೇಕಾಯಿತಲ್ಲ ಎಂಬ ದುಃಖ. ಇದು ಆತನ ಅಭಿಮಾನಕ್ಕೆ ಧಕ್ಕೆ ತಂದಿತು.

ಆ ರಾತ್ರಿ ಶೈಲೇಶನಿಗೆ ನಿದ್ದೆಯೇ ಹತ್ತಲಿಲ್ಲ. ಮಂಚದ ಮೇಲೆ ಬಿದ್ದು ಇದೇ ವಿಷಯದ ಮೇಲೆ ನಾನಾ ಬಗೆಯಾಗಿ ಯೋಚಿಸತೊಡಗಿದ. ಕೊನೆಗೆ ಬೆಳಗಾಗುವ ಹೊತ್ತಿಗೆ ಆತನಿಗೊಂದು ಸುಲಭೋಪಾಯ ಸೂಚಿಸಿತು. "ಉಷೆಯನ್ನು ಕರೆಯಲು ಯಾರನ್ನಾದರೂ ಕಳಿಸಿದರಾಯಿತು. ಅವಳೆಂದೂ ಬರಲಿಕ್ಕಿಲ್ಲ. ಬಂದರೂ ಇಲ್ಲಿ ನಿಲ್ಲಲಿಕ್ಕಿಲ್ಲ. —ಯಾಕೆಂದರೆ ಇದು ಪ್ಲೇಂಥರ ಮನೆ. ಇದರಿಂದ ನನ್ನದೇನೂ ತಪ್ಪಿಲ್ಲವೆಂದು ಜನರು ನಂಬುವರು. ಮೂರು-ನಾಲ್ಕು ದಿನದ ಮಾತಿಗೆ ಸೋಮೇಂದ್ರನನ್ನು ಅತ್ತೆಯ ಮನೆಗೆ ಕಳುಹಿಸಿಕೊಡುವೆ. ನಾನೂ ಹೇಗಾದರೂ ಮಾಡಿ ಕಳೆಯುವೆ. ಅಂದರೆ ಈ ತೊಂದರೆಯು ನಿವಾರಣೆಯಾದೀತು." ಇಂತಹ ಸುಲಭೋಪಾಯ ಹುಡುಕಲು ಇಷ್ಟು ಹೊತ್ತು ತಗಲಿದುದನ್ನು ಕಂಡು ತಾನೇ ಆಶ್ಚರ್ಯಪಟ್ಟುಕೊಂಡ. ಕೊನೆಗೂ ಇದೇ ಯೋಗ್ಯವೆಂದು ಕೀರ್ಮಾನಿಸಿದ.

ಶೈಲೇಶ ಏಳು ದಿನದ ರಜೆ ತೆಗೆದುಕೊಂಡ. ಪ್ರಯಾಗದಲ್ಲಿ ಆತನ ಬಾಲ್ಯದ ಗೆಳೆಯನೊಬ್ಬನಿದ್ದ. ತಾನು ಪ್ರಯಾಗಕ್ಕೆ ಬರುತ್ತೇನೆಂದು ತಾರಿನಿಂದ ಆತನಿಗೆ ತಿಳಿಸಿದ. ಆ ಮೇಲೆ ತಂಗಿ ವಿಭಾಳಿಗೆ ಒಂದು ಪತ್ರ ಬರೆದ. ಅದರಲ್ಲಿ "ಉಷೆಯನ್ನು ಕರೆಯಲು ನಂದಿಗ್ರಾಮಕ್ಕೆ ಜನ ಕಳಿಸಿದ್ದೇನೆ. ಆಕೆ

ಬಂದು ಎರಡು ದಿನದ ಮೇಲೆ ನೀನು ಬಂದು ಸೋಮೇಂದ್ರನನ್ನು ಕರೆದು ಕೊಂಡು ಹೋಗು. ನಾನು ಪ್ರಯಾಗಕ್ಕೆ ಹೋಗುತ್ತಿದ್ದೇನೆ. ಅಲ್ಲಿಂದ ಬರಲು ನನಗೆ,ಒಂದು ವಾರ ಹತ್ತೀತು. ”

ಶೈಲೇಶನಿಗೊಬ್ಬ ಬಳಗದ ಬಂಧುವಿದ್ದ. ಆತ ಹೇಳಿದಂತೆ ಕೇಳು ತ್ತಿದ್ದ. ಒಂದು ಫರ್ಮಿನಲ್ಲಿ ನೌಕರಿಗಿದ್ದ. “ನೀನು ನಾಳೆ ನಂದಿಗ್ರಾಮಕ್ಕೆ ಹೋಗಿ ನಿನ್ನ ಅತ್ತಿಗೆಯನ್ನು ಕರೆದುಕೊಂಡು ಬಾ” ಎಂದು ಹೇಳಿದ.

ಭೂತನಾಥನಿಗೆ ಆಶ್ಚರ್ಯವಾಯಿತು. “ ಈಗ ಇನ್ನೆಲ್ಲಿಯ ಅತ್ತಿ ಗೆಯೋ ಅಣ್ಣಾ ?”

“ ನೀನು ನಿಬ್ಬಣದ ಸಂಗಡ ಹೋಗಿದ್ದಿಯಲ್ಲಾ ಉಮೇಶ ಭಟ್ಟಾ ಚಾರ್ಯನ ಮನೆಗೆ ?”

“ ಹೋದುದೇನೋ ನಿಜ. ಆದರೆ ನಮಗೆ ಯಾರೊಬ್ಬರ ಪರಿಚ ಯವೂ ಇಲ್ಲ. ಅಂದ ಬಳಿಕ ಅತ್ತಿಗೆ ನನ್ನ ಜೊತೆಗೆ ಹೇಗೆ ಬಂದಾಳು?”

“ ಬಂದರೆ ಬರುತ್ತಾಳೆ; ಇಲ್ಲವಾದರೆ ಇಲ್ಲ. ಅದೆಲ್ಲ ನಿನಗೇಕೆ ? ಸಂಗಡ ಆಳನ್ನೂ, ದಾಸಿಯನ್ನೂ ಕರೆದುಕೊಂಡು ಹೋಗು. ಆಕೆ ಬರು ವುದಿಲ್ಲವೆಂದರೆ ಕೂಡಲೇ ಹೊರಟು ಬಾ. ”

“ ಒಳ್ಳೇದು ಹೋಗುವದಂತೂ ಹೋಗುವೆ. ಹೊಡೆದಾಟವೊಂದು ಆಗದಿದ್ದರೆ ಸಾಕು. ”

ಶೈಲೇಶ ಆತನ ಕೈಯ್ಯಲ್ಲಿ ಕೆಲವು ಹಣವನ್ನಿಟ್ಟ. ಒಂದು ಬೀಗದ ಕೈಯನ್ನೂ ಕೊಟ್ಟು ನುಡಿದ, “ ಇಂದು ರಾತ್ರಿಯ ಟ್ರೇನಿನಿಂದ ನಾನು ಪ್ರಯಾಗಕ್ಕೆ ಹೋಗುವೆ. ಏಳು ದಿನದ ನಂತರ ಬರುವೆ. ಆಕೆ ಬಂದರೆ ಈ ಬೀಗ ಕೊಡು. ಆ ಕಪಾಟು ತೋರಿಸು. ಈ ಹಣದಿಂದ ಒಂದು ತಿಂಗಳು ದೂಡಿದರಾಯಿತು. ”

“ ಈ ವಿಚಾರ ಈಗ ಎಲ್ಲಿಂದ ಬಂತು ಅಣ್ಣಾ ? ಇದೊಂದು ಗಂಡಾಂ ತರವನ್ನು ಮೈಮೇಲೆ ಬರಮಾಡಿಕೊಳ್ಳುತ್ತಿಲ್ಲವಷ್ಟೇ ?”

ಶೈಲೇಶ ತುಸು ಯೋಚನಾ ಮಗ್ನನಾದ. ಮೇಲೆ ನಿಟ್ಟುಸಿರಿಟ್ಟು “ ಆಕೆ ನಿಶ್ಚಯವಾಗಿಯೂ ಬರುವದಿಲ್ಲ. ಆದರೆ ಧರ್ಮ, ಹಾಗೂ ಸಮಾಜದ

ದೃಷ್ಟಿಯಿಂದ ಏನಾದರೂ ನಟಿಸಬೇಕಲ್ಲವೇ ? ಶ್ಯಾಮ ಬಾಜಾರಕ್ಕೆ ಹೋಗಿ ಸೋಮೇಂದ್ರನನ್ನು ಕರೆದುಕೊಂಡು ಹೋಗಲು ವಿಭಾಳಿಗಷ್ಟು ತಿಳಿಸಿಬಿಡು.''

ರಾತ್ರಿ ಪಂಜಾಬ ಮೇಲಿನಿಂದ ಶ್ರೈಲೇಶ್ವರ ಪ್ರಯಾಗಕ್ಕೆ ಪ್ರಯಾಣ ಬೆಳೆಸಿದ.

೩.

ಈ ಘಟನೆ ನಡೆದು ಎಷ್ಟೋ ದಿನ ಉರುಳಿವೆ. ಒಂದು ಮಧ್ಯಾನ ಮೋಟರ ಬಂದು ಬಾಗಿಲ ಮುಂದೆ ನಿಂತಿತು. ಒಂದೆರಡು ನಿಮಿಷಗಳಲ್ಲಿ ೨೨-೨೩ ವಯುಸ್ಸಿನ ಮಹಿಳೆಯೋರ್ವಳು ಮನೆಯೊಳಗೆ ಹೊಕ್ಕಳು. ಆಕೆ ನೇರವಾಗಿ ದಿವಾಣಖಾನೆಗೆ ತಲುಪಿದಳು. ಅಲ್ಲಿ ಸೋಮೇಂದ್ರ ತನ್ನ ಹೊಸ ತಾಯಿಗೆ ಅನೇಕ ಚಿತ್ರಗಳನ್ನು ತೋರಿಸುತ್ತಿದ್ದ. ಆತನ ಮೋರೆಯಲ್ಲಿ ಗೆಲುವಿನ ನವಿಲು ಲಾಸ್ಯವಾಡುತ್ತಿತ್ತು. ಆತ ಬಂದವಳ ಪರಿಚಯ ಮಾಡಿಸುತ್ತ '' ಅಮ್ಮಾ, ಈಕೆಯೇ ನನ್ನ ಅತ್ತೆ '' ಎಂದ.

ಉಷೆ ಎದ್ದುನಿಂತಳು. ಸಾಧಾರಣ ತರಗತಿಯ ಕೆಂಪು ಅಂಚಿನ ಸೀರೆ ಉಟ್ಟಿದ್ದಳು. ಕೈ-ಕಿವಿಗಳಲ್ಲೆಲ್ಲ ಒಂದೆರಡು ಅಲ್ಪ ಬೆಲೆಯ ಆಭರಣಗಳಿದ್ದವು. ಆ ನಿರಾಭರಣ ಸುಂದರಿಯನ್ನು ಕಂಡು ವಿಭಾಳು ಚಕಿತಳಾದಳು.

ಉಷೆಯೇ ಮೊದಲು ಮಾತಾಡಲುಪಕ್ರಮಿಸಿದಳು. '' ಮಗೂ, ಅತ್ತೆಗೆ ನಮಸ್ಕರಿಸಲಿಲ್ಲವಲ್ಲ !''

ಸೋಮೇಂದ್ರ ಈಗ ಮಾತ್ರ ಈ ಶಿಷ್ಟಾಚಾರದ ಶಿಕ್ಷಣಹೊಂದುತ್ತಿದ್ದ. ಆತ ಗಡಿಬಿಡಿಯಿಂದ ಹೇಗೆ ಹೇಗೋ ಸಂಪ್ರದಾಯದ ಶಾಸ್ತ್ರ ಮುಗಿಸಿದ. '' ಅವ್ವಾ ನಿಂತಿರುವಿಯೇಕೆ ? ಕುಳಿತುಕೊಳ್ಳಿ '' ಎಂದಳು ಉಷೆ.

'' ನೀವು ಯಾವಾಗ ಬಂದಿರಿ ?''

'' ಸೋಮವಾರ ಬಂದಿದ್ದೆ. ಇಂದು ಬುಧವಾರ. ಅದರಿಂದ ನಾನು ಬಂದು ಮೂರು ದಿನವಾಯಿತು. ಆದರೆ ಎಷ್ಟೊತ್ತಿನ ತನಕ ನೀವು ಹೀಗೇ ನಿಂತಿರುವಿರಿ ?''.

ವಿಭಾ ಬಂದುದು ಉಷೆಯ ಪರಿಚಯ ಬೆಳೆಸಲಿಕ್ಕಲ್ಲ. ಬರುವಾಗಲೇ ಜೊತೆಗೆ ಉದ್ದಾಮತೆಯನ್ನೂ ತಂದಿದ್ದಳು. "ನನಗೆ ಕುಳಿತುಕೊಳ್ಳುವಷ್ಟು ಅವಕಾಶವಿಲ್ಲ. ತುಂಬಾ ಕೆಲಸವಿದೆ, ಸೋಮೇಂದ್ರನನ್ನು ಕರೆದುಕೊಂಡು ಹೋಗೋಣವೆಂದು ಕೆಲಸಬಿಟ್ಟು ಬಂದೆ."

"ನಾನೊಬ್ಬಳೇ ಹೇಗೆ ಇರಲಿ ಅತ್ತಿಗೆ? ನಮ್ಮಣ್ಣಂದಿರ ಮನೆಯಲ್ಲಿ ಹುಟ್ಟಿದ ಮಕ್ಕಳೆಲ್ಲ ನನ್ನ ಕೈಯಲ್ಲೇ ಬೆಳೆದು ದೊಡ್ಡವರಾದುವು. ಜೊತೆಗೆ ಯಾರೂ ಇಲ್ಲದಿದ್ದರೆ, ನನಗೆ ಬದುಕೇ ಹೊರೆಯಾಗುತ್ತದೆ" ಎಂದು ಉಷೆಯು ಮೃದುವಾಗಿ ನಕ್ಕಳು.

ವಿಭಾ ತನ್ನ ಕಾಠಿಣ್ಯ ಬಿಡಲಿಲ್ಲ. ಆಕೆ ಸೋಮೇಂದ್ರನನ್ನು ಉದ್ದೇಶಿಸಿ ಮಾತನಾಡಿದಳು, "ನಿಮ್ಮ ತಂದೆ ನಿನ್ನನ್ನು ಕರೆದುಕೊಂಡು ಹೋಗಲು ನನಗೆ ಹೇಳಿದ್ದಾನೆ. ಸೋಮೇಂದ್ರ, ಇಲ್ಲಿ ನಿಂತು ನಿನ್ನೊಡನೆ ವೇಳೆ ಹಾಳು ಮಾಡಲು ನನಗೆ ಸಮಯವಿಲ್ಲ. ಹೋಗು, ಬೇಗ ವಸ್ತ್ರ ಹಾಕಿಕೋ, ನನಗೆ ಈಗ ತಾನೇ ನ್ಯೂ ಮಾರ್ಕೆಟಿಗೆ ಹೋಗುವದಿದೆ."

ಸೋಮೇಂದ್ರನಿಗೆ ಏನು ಮಾಡಲಿಕ್ಕೂ ತೋಚದು. ತಾಯಿಯನ್ನೂ ಬಿಡಲಾರ, ಅತ್ತೆಯನ್ನೂ ಬಿಡಲಾರ. "ಅತ್ತೇ, ಅಮ್ಮ ಹೋಗುವುದು ಬೇಡ ಎನ್ನುತ್ತಿದ್ದಾಳೆ."

ಉಷೆಗೆ ಆತನ ಸಂಕಟ ವಿದಿತವಾಯಿತು. "ಮಗೂ, ನೀನು ಹೋಗುವುದು ಬೇಡವೆಂದು ನನ್ನ ಅಭಿಪ್ರಾಯವಲ್ಲ. ನೀನು ಹೋದೆಯೆಂದರೆ ನನಗೊಬ್ಬಳಿಗೇ ಬೇಸರವಾಗುತ್ತದೆಂದು ಮಾತ್ರ ಹೇಳಿದೆ."

ಆತ ಮರುಮಾತಾಡದೆ ಉಷೆಯ ಹತ್ತಿರ ಹೋಗಿ ಅವಳ ಸೆರಗನ್ನು ಹಿಡಿದು ನಿಂತ. ಆತನ ತಲೆಯನ್ನು ನೇವರಿಸುತ್ತ ಉಷೆಯು ಅತ್ತಿಗೆಗೆ "ಅವನಿಗೆ ಹೋಗುವ ಇಚ್ಛೆಯಿಲ್ಲ" ಎಂದಳು.

ಸಿಟ್ಟು ಮತ್ತು ಲಜ್ಜೆಯಿಂದ ವಿಭಾಳ ಮೋರೆ ಕಪ್ಪಿಟ್ಟಿತು. ವಿಭಾ ಓದಿದವಳೆಂಬುದು ನಿಜ. ಸುಧಾರಿಸಿದ ಸಭ್ಯ ಸ್ತ್ರೀಯರೆನ್ನುವವರಿಗಿಂತ ಆಕೆ ಹೆಚ್ಚು ಕಲಿತಿದ್ದಳು. ಆದರೂ ಆಕೆ ತಾಳ್ಮೆಗೆಟ್ಟಳು. "ಅದೆಲ್ಲ ಇರಲಿ ಆತ ಹೋಗಲೇಬೇಕು. ನೀವು ಅವನಿಗೆ ಈ ರೀತಿ ಪುಸಲಾಯಿಸದಿದ್ದರೆ ತಂದೆಯ ಮಾತನ್ನೆಂದೂ ಮೀರುತ್ತಿರಲಿಲ್ಲ."

ಇಂತಹ ಚುಚ್ಚು ಮಾತಾಡಿದರೂ ಉಷೆಯು ವಿಚಲಿತಳಾಗಲಿಲ್ಲ. ತುಟಿಯೇನೋ ಒಮ್ಮೆ ಅದುರಿತು. ಇದರ ಹೊರತು ಆಕೆಯ ಮುಖದಲ್ಲಾವ ಬದಲಾವಣೆಯೂ ಕಂಡುಬರಲಿಲ್ಲ.

"ನಾವು ಇಷ್ಟು ದೊಡ್ಡವರಾಗಿದ್ದರೂ ನಮ್ಮ ಕರ್ತವ್ಯ ಕರ್ಮ—ಪತಿಯಾಜ್ಞಾಪಾಲನೆ ಮಾಡುವದಿಲ್ಲ. ಸೋಮೇಂದ್ರನಂತೂ ಹಸುಳೆ. ಅವನ ಬುದ್ಧಿಯಾದರೂ ಎಷ್ಟು? ಅಲ್ಲದೆ ಪುಸಲಾಯಿಸಿದ ಆರೋಪ ಹೊರಿಸುತ್ತೀರಿ. ಅದರ ಬಗ್ಗೆ ನನ್ನ ನಮ್ರ ವಿನಂತಿ ಇಷ್ಟು: ನನ್ನ ಕೈಯಿಂದ ಎಷ್ಟೋ ಮಕ್ಕಳು ದೊಡ್ಡವರಾಗಿದ್ದಾರೆ. ಆದುದರಿಂದ ಈ ಮಗು ನನ್ನ ಜೊತೆಯಲ್ಲಿದ್ದರೂ ನೀವೇನು ವಿಶೇಷ ಕಾಳಜಿ ಮಾಡಬೇಕಾಗಿಲ್ಲ."

"ಹಾಗೇ ಆಗಲಿ. ನಾನು ಅಣ್ಣನಿಗಿಂದೇ ಪತ್ರ ಹಾಕಿಬಿಡುತ್ತೇನೆ."

"ಹಾಕು. ಅಷ್ಟೇ ಅಲ್ಲದೆ ಪ್ರಯಾಗದಲ್ಲಿ ಕುಳಿತು ಮಾಡಿದ ಆಜ್ಞೆಗಿಂತಲೂ ಕಲಕತ್ತೆಯಿಂದ ಮಾಡಿದ ಆಜ್ಞೆಯೇ ಹೆಚ್ಚು ಮಹತ್ವದ್ದೆಂದು ನಾನು ಹೇಳುತ್ತೇನೆಂದೂ ಬರೆದುಬಿಡು. ಆದರೆ ಅತ್ತಿಗೆ, ಸಂಬಂಧದಿಂದಲೂ ವಯಸ್ಸಿನಿಂದಲೂ ನಿನಗಿಂತ ಹಿರಿಯಳೆಂಬುದನ್ನು ಲಕ್ಷ್ಯದಲ್ಲಿಡು. ಅದಕ್ಕಾಗಿ ನನ್ನ ಮಾತಿಗಾಗಿ ರೇಗುವ ಅವಶ್ಯವಿಲ್ಲ. ಸಿಟ್ಟಿನಿಂದ ನೀನು ಕುಳಿತುಕೊಳ್ಳಲಿಕ್ಕೆ ಸಹ ಬಯಸಲಿಲ್ಲ. ಆದರೆ ಒಂದಲ್ಲ ಒಂದು ದಿನ ಇದೇ ಅತ್ತಿಗೆಯ ಜೊತೆಯಲ್ಲಿ ಬಂದು ಕುಳಿತುಕೊಳ್ಳಲು ನೀನೇ ಮನಸ್ಸು ಮಾಡುವೆಯೆಂದು ಆತ್ಮವಿಶ್ವಾಸದಿಂದ ಹೇಳುತ್ತೇನೆ."

"ಆಗಲಿ, ಇಂದು ಬಿಡುವಿಲ್ಲ. ನಮಸ್ಕಾರ" ಎಂದವಳೇ ತೀವ್ರವಾಗಿ ಕಾಲುಹಾಕುತ್ತ ಹೊರಟುಹೋದಳು. ಗಾಡಿಯಲ್ಲಿ ಕುಳಿತು ಮೇಲೆ ನೋಡಿದಾಗ ಸೋಮೇಂದ್ರನ ಜೊತೆಗೆ ಮಾಳಿಗೆಯ ಕಟಾಂಜನವನ್ನು ಹಿಡಿದು ನಿಶ್ಚಲ ಪ್ರತಿಮೆಯಂತೆ ನಿಂತು ತನ್ನನ್ನೇ ನಿಟ್ಟಿಸುತ್ತಿದ್ದ ಉಷೆಯು ಕಣ್ಣಿಗೆ ಬಿದ್ದಳು.

## ೪.

ಶೈಲೇಶ್ವರ ಹೋದುದು ಒಂದು ವಾರ ರಜೆಯ ಮೇಲಾದರೂ ಪ್ರಯಾಗದಲ್ಲಿ ಎರಡುವಾರ ಕಳೆದ. ಆ ಮೇಲೆ ಒಂದು ದಿನ ಅಕಸ್ಮಾತ್ತಾಗಿ ಮನೆಗೆ ಬಂದ. ಮುಂದಿನ ಅಂಗಣದಲ್ಲಿ ಸೋಮೇಂದ್ರ ಕುಳಿತಿದ್ದ.

ಬಿದಿರಿನ ಕೆಲವು ಕಡ್ಡಿ, ಬಣ್ಣಬಣ್ಣದ ಕಾಗದ, ಅಂಬು ತೆಗೆದುಕೊಂಡು ಕೆಲಸದಲ್ಲಿ ತನ್ಮಯನಾಗಿದ್ದ. ಆತ ತಂದೆ ಬಂದುದನ್ನೂ ನೋಡಿರಲಿಲ್ಲ. ನೋಡಿದಾಗ ನಾಚಿ ಗಡಿಬಿಡಿಯಿಂದೆದ್ದು ತಂದೆಗೆ ನಮಸ್ಕರಿಸಿದ. ಗುರು ಹಿರಿಯರಿಗೆ ಯಾಕೆ ನಮಸ್ಕರಿಸಬೇಕೆಂಬುದು ಇನ್ನೂ ಅವಗತವಾಗಿರಲಿಲ್ಲ ವೆಂಬುದು ಆತನ ಮುಖಮುದ್ರೆಯಿಂದ ಒಡೆದು ತೋರುತ್ತಿತ್ತು. ಶೈಲೇಂದ್ರ ನಿಗೆ ಆಶ್ಚರ್ಯವಾಯಿತು. "ಸೋಮೇಂದ್ರ, ಇದೆಲ್ಲ ಏನು ನಡಿಸಿರುವೆ?"

"ಅಪ್ಪಾ, ನೀನೇ ಹೇಳು ನೋಡುವಾ?"

"ಇದೆಲ್ಲ ನನಗೇನು ಗೊತ್ತು ?"

ತಂದೆಗೆ ತಿಳಿಯದೆಂದು ಮಗನು ಚಪ್ಪಾಳೆಯಿಕ್ಕಿ ನಗತೊಡಗಿದ. ಹಾಗೂ ಸಂತೋಷದಿಂದ "ಆಕಾಶ ದೀಪ" ಎಂದ.

"ಆಕಾಶ ದೀಪ! ಅದರ ಉಪಯೋಗವೇನು ?"

ಆಕಾಶದೀಪದ ಅದ್ಭುತ ಪ್ರಯೋಗವನ್ನು ಆತ ಇಂದೇ ಅರಿತಿದ್ದ. "ಇಂದು ಸಂಕ್ರಾಂತಿ ಅಪ್ಪಾ. ಸಾಯಂಕಾಲ ಎತ್ತರವಾದ ಗಳಕ್ಕೆ ಇದನ್ನು ತೂಗಹಾಕಬೇಕು. ಇದರಿಂದ ಸ್ವರ್ಗಸ್ಥರಾದ ಹಿರಿಯರಿಗೆ ಬೆಳಕು ದೊರೆ ಯುತ್ತದೆ. ಅವರು ನಮ್ಮನ್ನು ಹರಸುತ್ತಾರೆ ಎಂದು ತಾಯಿಯೆಂದಿ ದ್ದಾಳೆ."

ಶೈಲೇಶ್ವರನಿಗೆ ಸಿಟ್ಟು ಬಂದಿತು. ಎಲ್ಲವನ್ನೂ ಕಾಲಿನಿಂದೊದೆದು ಹಾಳುಮಾಡಿಬಿಟ್ಟ. "ಹೌದು, ಹೌದು! ಆಶೀರ್ವಾದವಂತೆ ಆಶೀರ್ವಾದ! ಜಗತ್ತಿನ ಕುಸಂಸ್ಕಾರಗಳನ್ನೆಲ್ಲ ಕಲಿಯುತ್ತಿರುವಂತೆ ಕಾಣುತ್ತಿದೆ. ಹೋಗೋ, ಪುಸ್ತಕ ತೆಗೆದುಕೊಂಡು ಓದು."

ಹೀಗೆ ಹಾಳಾದುದನ್ನು ಕಂಡು ಸೋಮೇಂದ್ರನಿಗೆ ಅಳು ಬಂದಿತು. ಆಗ ಮಾಳಿಗೆಯ ಮೇಲಿನಿಂದ ಒಬ್ಬರು ಮಧುರವಾಗಿ "ಮಗೂ, ಪೇಟೆ ಯಿಂದ ನಾಳೆ ನಿನಗೊಂದು ಸೊಗಸಾದ ಆಕಾಶದೀಪ ಕೊಂಡುಕೊಡುವೆ. ಅಳಬೇಡ. ಇಲ್ಲಿ ಬಾ" ಎಂದು ಕರೆದರು.

ಸೋಮೇಂದ್ರನು ಕಣ್ಣೊಜ್ಜುತ್ತಲೇ ಮೇಲೆ ಹೋದ. ಶೈಲೇಶನು ಬೇರೆಲ್ಲಿಯೂ ನೋಡದೆ ನೇರವಾಗಿ ತನ್ನ ಓದುವ ಕೋಣೆಯಲ್ಲಿ ಹೋಗಿ

ಕುಳಿತ. ತುಸು ಹೊತ್ತಿನಲ್ಲಿಯೇ ಠಣ್, ಠಣ್ ಎಂದು ಗಂಟೆ ಬಾರಿಸಿದ." ಆದರೆ ಯಾರೂ "ಓ"ಗೊಡಲಿಲ್ಲ.

"ಅಬ್ದುಲ್?"

ಅಬ್ದುಲ್ ಬರಲಿಲ್ಲ.

"ಗಿರಿಧಾರೀ? ಏ ಗಿರಿಧಾರೀ?"

ಗಿರಿಧಾರಿಯ ಬದಲು ಗೋಕುಲನೆಂಬ ಬಂಗಾಲಿಯ ನೌಕರನೊಬ್ಬ ಹಣಿಕಿಕ್ಕಿದ.—"ದನಿಯರೇ?" ಶೈಲೇಶನಿಗೆ ಸಂತಾಪವಾಗಿತ್ತು. "ದನಿ? ಎಲ್ಲ ಘಟಿಂಗರು ಸತ್ತುಹೋದರೇ?"

"ಇಲ್ಲ. ರಾಯರೇ?"

"ಹಾಗಾದರೆ ಅಬ್ದುಲ್ಲನೆಲ್ಲಿ?"

"ಅವ್ರಾವ್ರು ಅವನನ್ನು ತೆಗೆದುಹಾಕಿದರು. ಆತ ಮನೆಗೆ ಹೋಗಿರುವ."

"ಅಬ್ದುಲ್ಲನನ್ನು ತೆಗೆದುಹಾಕಿದರು. ಆತ ಮನೆಗೆ ಹೋಗಿರುವ."

"ಅಬ್ದುಲ್ಲನನ್ನು ತೆಗೆದು ಹಾಕಿದರೇ? ಆತ ಮನೆಗೆ ಹೋದನೇ? ಹಾಗಾದರೆ ಗಿರಿಧಾರಿಯೆಲ್ಲಿ?"

"ಆತನಿಗೂ ತೆಗೆದುಹಾಕಿದ್ದರಿಂದ ಮನೆಗೆ ಹೋಗಿದ್ದಾನೆ."

ಗೋಕುಲನ ಮಾತು ಕೇಳಿ ಶೈಲೇಶ ಚಕಿತನಾದ. "ಇನ್ನು ಯಾರಾದರೂ ಇದ್ದಾರೆಯೇ? ಅಥವಾ ಎಲ್ಲರ ಗತಿಯೂ ಇದೇ ರೀತಿಯಾಗಿದೆಯೇ?"

ಗೋಕುಲ ಗೋಣಲ್ಲಾಡಿಸಿ "ಇಲ್ಲ. ಎಲ್ಲರೂ ಇದ್ದಾರೆ."

"ಉಳಿದವರಾದರೂ ಯಾಕಿದ್ದಾರೆ? ಹೋಗು, ಹೊರಬೀಳು ಇಲ್ಲಿಂದ."

ಶೈಲೇಶ್ವರನು ತನ್ನ ಕೈಯಿಂದಲೇ ಬೂಟು ತೆಗೆದ. ಕೋಟು ಕಳಿಚಿ ಮೇಜಿನ ಮೇಲೆಯೇ ಇಟ್ಟ. ಹೊಸ ಧೋತರ ಉಟ್ಟು ಪಾಯಿಜಾಮೆ ಕಳೆದು ಹತ್ತಿರದಲ್ಲಿದ್ದ ಕುರ್ಚಿಯ ಮೇಲೆ ಒಗೆದ. ಕುರ್ಚಿಯ ಮೇಲೂ ಕುಳಿತುಕೊಳ್ಳದೆ ನೆಲದ ಮೇಲೆಯೇ ಒರಗಿದ. ನೆಕ್‌ಟ್ಯಾ, ಕೊಲರ್ ಇವುಗಳನ್ನು ಒಂದೊಂದು ಬದಿಗೆ ಒಗೆದ. ಕೊನೆಗೆ ಅಲ್ಲಿಂದ ಎದ್ದು ಕುರ್ಚಿಯ

ಮೇಲೆ ಕುಳಿತು ಮುಂದೆ ನೋಡಿದಾಗ ಮೇಜಿನ ಮೇಲೊಂದು ಪಟ್ಟಿ ಕಾಣಿಸಿತು. ಅದು ಚೆನ್ನಾಗಿ ತಯಾರಿಸಿದ್ದಾಗಿತ್ತು. ಅದರ ಮೇಲೆ ಮನೆಯ ಜಮಾ ಖರ್ಚಿನಪಟ್ಟಿ '' ಎಂದು ಬರೆದಿತ್ತು.

ಶೈಲೇಶ ಅದನ್ನು ನೋಡಿದ. ಹೆಂಗಸರು ಬರೆದಂತಿತ್ತು. ಅಂಗಡಿಯಿಂದ ತಂದ ಪ್ರತಿಯೊಂದು ಮಾಲಿನ ಬೆಲೆಯನ್ನು ಸ್ವಚ್ಛವಾಗಿ ನಮೂದಿಸಿತ್ತು. ಕೆಲ ಹೊತ್ತಿನಲ್ಲಿಯೇ ಒಬ್ಬ ಹೆಂಗಸು ಸಾವಕಾಶವಾಗಿ ಪ್ರವೇಶಿಸುತ್ತಿದ್ದಳು. ಈಕೆ ಯಾರೆಂದು ಗೊತ್ತಾಗದಿದ್ದರೂ, ದಾಸಿಯಲ್ಲವೆಂದು ಮಾತ್ರ ಊಹಿಸಿದ. ಕೂಡಲೇ ಲೆಖ್ಖದ ಪಟ್ಟಿಯನ್ನು ತನ್ಮಯತೆಯಿಂದ ಪರಿಶೀಲಿಸತೊಡಗಿದ. ಇತ್ತ ಬಂದ ಮಹಿಳೆಯು ಆತನ ಕಾಲ ಬಳಿಯಲ್ಲಿ ತಲೆಇಟ್ಟು ನಮಸ್ಕರಿಸಿದಳು. ಹಾಗೆಯೇ ಎದ್ದು '' ಈಗ ಚಹಾ ಕುಡಿಯುತ್ತೀರಾ? ಚಹಾ ಕುಡಿದ ಮೇಲೆ ಅನ್ನ ಸೇರುವುದಿಲ್ಲ. ''

'' ನಾನು ಊಟ ಮಾಡುವುದಿಲ್ಲ. ''

'' ಹಾಗೇ ಆಗಲಿ. ಊಟಮಾಡದಿದ್ದರೆ ಇಲ್ಲ. ಕೈ ಕಾಲನ್ನಾದರೂ ತೊಳೆದು ಮೇಲೆ ಬನ್ನಿ. ಇಂತಹ ಅವೇಳೆಯಲ್ಲಿ ಸ್ನಾನಮಾಡದಿದ್ದರೂ ನಡೆದೀತು. ಫಲಾಹಾರದ ವ್ಯವಸ್ಥೆಯಾಗಿದೆ. ಕುಮುದೆಗೆ ತುಸು ಶರಬತ್ತು ತಯಾರಿಸಲು ಹೇಳಿರುವೆ. ಏಳಿ, ಹೂಂ."

'' ಈಗ ಇರಲಿ. ''

'' ಅಯ್ಯೋ, ನಾನೇನು ಹುಲಿ, ತೋಳವಲ್ಲ. ನಾನೇ ಉಷಾ, ಒಮ್ಮೆ ಕಣ್ಣೆತ್ತಿ ನೋಡಿದರೆ ತಾನೇ ಗೊತ್ತಾದೀತು.''

'' ನಿನ್ನನ್ನು ಹುಲಿ, ಕರಡಿಯೆಂದೇನು ಕರೆದಿರುವೆನೇ ?''

'' ಹಾಗಾದರೆ ಹೀಗೇಕೆ ಅಂಜಿದಂತೆ—ಸಂಕೋಚದಿಂದ ವ್ಯವಹರಿಸುತ್ತಿರುವಿರಿ ?''

'' ನನಗೆ ಕೆಲಸವಿತ್ತು, ಅದಕ್ಕಾಗಿ ಹೋಗಬೇಕಾಯಿತು. ಆದರೆ ನೀನು ವಿಭಾಳೊಡನೆ ಏಕೆ ಜಗಳವಾಡಿದೆ ?''

'' ಇದೆಲ್ಲಿಯ ಮಾತು ಹೇಳುತ್ತೀರಿ. ಆಕೆ ಎಂದೂ ಹಾಗೆ ಜರೆದಿರಲಾರಳು. ''

“ ಅಬ್ದುಲನನ್ನೇಕೆ ತೆಗೆದುಹಾಕಿದೆ ?”

“ ನಾನು ತೆಗೆದುಹಾಕಿದೆನೆಂದು ಯಾರು ಹೇಳಿದರು ? ಆತನಿಗೆ ಒಂದು ವರ್ಷದಿಂದ ಸಂಬಳ ದೊರೆತಿರಲಿಲ್ಲವಂತೆ. ಮನೆಗೆ ಹೋಗಲು ಉತ್ಸುಕನಾಗಿದ್ದ. ಆತನ ಸಂಬಳ ಸಲ್ಲಿಸಿ ರಜೆಕೊಟ್ಟು ಕಳಿಸಿದೆ.”

ಶೈಲೇಶ ವಿಸ್ಮಿತನಾದ. “ ಅವನ ಅಷ್ಟೂ ಸಂಬಳ ಕೊಟ್ಟುಬಿಟ್ಟಿಯಾ? ಆತನೆಂದೂ ತಿರುಗಿ ಬರಲಿಕ್ಕಿಲ್ಲ. ಹಾಗಾದರೆ ಗಿರಿಧಾರಿ ಏಕೆ ಹೋದ ? ”

“ ನೀವು ಅವರ ಸಂಬಳ ಕೊಡದೆ ಯಾಕೆ ತೊಂದರೆಗೀಡುಮಾಡುತ್ತೀರಿ ? ಅವರಿಗೇನು ಮನೆ-ಮಠ ಒಂದೂ ಇಲ್ಲವೇ ? ಗಿರಿಧಾರಿಗೂ ಸಂಬಳ ಕೊಟ್ಟು ರಜೆ ಕೊಟ್ಟಿರುವೆ. ”

“ ಇದೆಲ್ಲ ಅತಿರೇಕವಾಯಿತು. ಈ ಮನೆ ವಶಿಷ್ಠನ ಆಶ್ರಮವಾಗಲು ಇನ್ನೇನು ಅಭ್ಯಂತರವಿಲ್ಲ.” ಆತ ಇನ್ನೂ ತನಕ ಲೆಖ್ಖದ ಪಟ್ಟಿಯನ್ನೇ ದಿಟ್ಟಿಸುತ್ತಲಿದ್ದ. ಆಗ ದೊಡ್ಡ ರಕಮೊಂದು ಕಣ್ಣಿಗೆ ಬಿತ್ತು. “ಇದೇನು? ೪೦೫ ರೂಪಾಯಿ ” ಎಂದು ಗಾಬರಿಯಾಗಿ ಕೇಳಿದ.

“ ಸೆಟ್ಟಿಗೆ ಈ ರಕಮನ್ನು ಮುಟ್ಟಿಸಿರುವೆ. ಇನ್ನೂ ಇನ್ನೂರರಷ್ಟು ಬಾಕಿ ಇದೆ. ಮುಂದಿನ ತಿಂಗಳು ಪೂರಾ ಮುಟ್ಟಿಸುವುದಾಗಿ ಹೇಳಿದ್ದೇನೆ.”

“ ಆ, ಆ ಶೆಟ್ಟಿಯದು ಆರುನೂರು ರೂಪಾಯಿ ಬಾಕಿಯಿತ್ತೇ? ”

“ ಇರದೇನು ಮಾಡೀತು? ಬೆಲೆಕೊಟ್ಟು ಸಾಮಾನು ತರುವಂತಿಲ್ಲ. ಬಾಕಿ ಎಷ್ಟೆಂದು ನೋಡುವಂತಿಲ್ಲ. ಎರಡು ವರ್ಷದಿಂದಲೂ ಆತನ ಬಾಕಿ ಹಾಗೇ ಬಿದ್ದಿದೆಯಂತೆ. ”

“ ಈಗಾಗಲೇ ಎರಡು ವರ್ಷದ ಲೆಖ್ಖವನ್ನೂ ಪರಿಶೀಲಿಸಿದೆಯಾ?”

“ ಹೌದು, ನೋಡದೇನು ಮಾಡಲಿ? ಅನ್ಯಥಾ ಮಾರ್ಗವಿರಲಿಲ್ಲ.”

ಶೈಲೇಶ ಯೋಚಿಸುತ್ತಿರುವಂತೆ ಕಂಡಿತು. ಉಷೆಯ ಪರಿಚಯವಾಗಿ ಐದೇ ನಿಮಿಷ ಕಳೆದಿದ್ದರೂ ಆತನಿಗೆ ಸಂಕೋಚವೆನಿಸುತ್ತಿತ್ತು.

“ಏನು ಯೋಚನೆ ನಡಿಸಿರುವಿರಿ?” ಎಂದು ಉಷೆಯೇ ಪ್ರಶ್ನಿಸಿದಳು.

“ಇದ್ದ ಹಣವೆಲ್ಲ ಈಗಲೇ ಖರ್ಚಾದರೆ ಇನ್ನು ಹೇಗೆ ಹದಿನೈದು ದಿನ ದೂಡುವುದು ಎಂದು ಯೋಚಿಸುತ್ತಿರುವೆ. ಸಂಬಳ ಬರಲು ಇನ್ನೂ ಹದಿನೈದು ದಿನವುಳಿಯಿತು.”

"ನನಗಿಷ್ಟೂ ಮುಂದಾಲೋಚನೆ ಇಲ್ಲವೆಂದು ಭಾವಿಸಿದಿರಾ? ಇನ್ನು ಹದಿನೈದು ದಿನವೇಕೆ? ತಿಂಗಳ ಮೊದಲು ಹಣದ ಮಾತೆತ್ತುವೆನೋ ನೋಡಿ ಬೇಕಾದರೆ! ಆದರೆ ನಿಮಗೆ ಸಾಲ ಬಹಳವಿರಬೇಕೆಂದು ತೋರುತ್ತಿದೆ. ನನ್ನೊಡನೆ ಮರೆಮಾಚಬೇಡಿ. ಗವಳಿಗ ತನಗೆ ೧೫೦ ರೂಪಾಯಿ ಕೊಡ ಬೇಕು ಎನ್ನುತ್ತಿದ್ದ. ಅಗಸನದು ೫೦ ರೂಪಾಯಿ ಬಾಕಿಯಂತೆ. ಹೊಲಿಗೆ ಯದೆಷ್ಟು ಬಾಕಿಯಿದೆಯೋ ದರ್ಜಿಗಳಿಗೇ ಗೊತ್ತು. ಅವರೆಲ್ಲರಿಗೂ ಬಾಕಿ ಪಟ್ಟಿ ಕಳುಹಿಸಲು ಹೇಳಿರುವೆ."

"ಇದೆಲ್ಲ ಏನು ಮಾಡಿಬಿಟ್ಟೆ? ಸಾವಿರಾರು ರೂಪಾಯಿಯ ಲೆಖ್ಖ ತೋರಿಸಿದರೆ ಏನು ಮಾಡುವಿ? ಎಲ್ಲಿಂದ ಕೊಡುವಿ?"

"ಒಮ್ಮೆಲೇ ತೀರಿಸಿ ಬಿಡುತ್ತೇನೆಂದು ನಾನಾದರೂ ಎಲ್ಲಿ ಹೇಳಿರುವೆ? ಮೂರು ನಾಲ್ಕು ತಿಂಗಳುಗಳಲ್ಲೇ ಅವರ ಸಾಲವನ್ನೆಲ್ಲ ತೀರಿಸಿದರಾಯಿತು. ಇದರ ಹೊರತಾಗಿ ಇನ್ನಾವ ಸಾಲವೂ ಇಲ್ಲವಷ್ಟೇ."

"ಹೋದಸಲ ಸಿಮ್ಲಾಕ್ಕೆ ಹೋಗುವಾಗ ನೋಟು ಬರೆದುಕೊಟ್ಟು ಎರಡು ಸಾವಿರ ರೂಪಾಯಿ ಸಾಲ ತಂದಿದ್ದೆ. ಅದರಲ್ಲಿ ಒಂದು ಪೈ ಸಹ ತೀರಿಸಿಲ್ಲ."

"ಇದನ್ನೆಲ್ಲ ಒಂದು ವರ್ಷದಲ್ಲಿ ತೀರಿಸಲಾಗುತ್ತದೆಯೋ ಇಲ್ಲವೋ? ಏನೇ ಇರಲಿ; ಇನ್ನು ಮುಂದೆ ಮಾತ್ರ ಹಾಗಾಗದಂತೆ ನೋಡಿಕೊಳ್ಳಿ."

"ನನಗೇಕೋ ಈ ಜನ್ಮದಲ್ಲೇ ಋಣಮುಕ್ತನಾಗುವ ಆಶೆ ತೋರು ವದಿಲ್ಲ."

"ಹಾಗಾದರೆ, ಹಿಂದೆಂದಾದರೂ ಈ ಯೋಚನೆ ಬಂದಿದ್ದಿತೇ?"

"ಎಷ್ಟೋ ಸಲ ಯೋಚಿಸಿದ್ದೇನೆ. ಅದನ್ನೆಲ್ಲ ಏನು ಹೇಳಲಿ? ಒಮ್ಮೊಮ್ಮೆ ಮಧ್ಯರಾತ್ರಿಯಲ್ಲಿಯೇ ನಿದ್ರಾಭಂಗವಾಗಿ ಹೊರಳಾಡಿದ್ದೂ ಇದೆ. ಮನಸ್ಸಿಗೆ ನೆಮ್ಮದಿಯೇ ಇಲ್ಲ. ಸಿಕ್ಕ ಸಂಬಳದಿಂದಂತೂ ನಿರ್ವಾಹವಾಗು ವಂತಿಲ್ಲ. ಹಣದ ಅಡಚಣೆ ಇಲ್ಲದ ತಿಂಗಳೊಂದೂ ಇಲ್ಲ. ಉಷಾ, ಈ ಸಾಲ ಎಂದಾದರೂ ತೀರಬಹುದೆಂದು ನಿನಗನಿಸುತ್ತಿದೆಯೇ?"

ಉಷೆಯ ಕಣ್ಣೆವೆ ತೇವವಾಯಿತು. ಅರ್ಧ ತಾಸಿನ ಹಿಂದೆ ಅಪರಿಚಿತ ನಾದ ಮನುಷ್ಯನ ಸುಖದುಃಖದಲ್ಲಿ ಈಗ ಆಕೆ ಪಾಲುಗಾರಳಾಗಿದ್ದಾಳೆ. ''ಅದರ ಕಾಳಜಿ ಬಿಡಿ. ಅದೇನು ದೊಡ್ಡದಲ್ಲ" ಎಂದು ಧೈರ್ಯ ಹೇಳಿದಳು.

''ಆದರೆ, ಎಲ್ಲರಿಗೂ ತೊಂದರೆ...."

"ಇಲ್ಲ. ಹಾಗಾಗದು. ಅದನ್ನೆಲ್ಲ ನಾನು ನೋಡಿಕೊಳ್ಳುವೆ."

ಶೈಲೇಶ ಮರುಮಾತಾಡಲಿಲ್ಲ. ಕಾರ್ಮೋಡ ತುಂಬಿದ ಆಕಾಶದಲ್ಲಿ ಎಲ್ಲಿಂದಲೋ ಬೆಳಕು ಬಂದಂತೆ ಭಾಸವಾಯಿತು.

## ೫.

ಶೈಲೇಶನ ಮೇಜಿನ ಮೇಲೆ ಕಾಗದ ಪತ್ರ ಅಸ್ತವ್ಯಸ್ತವಾಗಿ ಹರ ಡಿತ್ತು. ಯಾರ್ಯಾರಿಂದಲೋ ಬಂದ ಕಾರ್ಡ ಕವರು ಒಂದೆಡೆ ದೈನಿಕ, ಮಾಸಿಕ, ಸಾಪ್ತಾಹಿಕ ಪತ್ರಿಕೆಗಳ ಗುಂಪು ಇನ್ನೊಂದೆಡೆ. ಕಾಗದ ಪತ್ರ ಗಳಿಗೆ ಉತ್ತರ ಬರೆಯಬೇಕಿತ್ತು. ವರ್ತಮಾನಗಳ ಕಡೆಗೆ ಒಮ್ಮೆ ಕಣ್ಣು ಹಾಯಿಸಬೇಕಿತ್ತು; ಹೀಗಾಗಿ ಬೆಳಗಿನಿಂದ ಬೈಗಿನ ತನಕ ವಿರಾಮವೇ ದೊರೆ ಯಲಿಲ್ಲ. ಆತ ದಿನವೆಲ್ಲ ಏಕಾಗ್ರತೆಯಿಂದ ಕೆಲಸ ಮಾಡಿದ ಮೇಲೆ ಆತನ ಮನಸ್ಸು ಹಗುರೆನಿಸಿತು. ಮೋರೆಯ ಮೇಲೆ ಶಾಂತಿಯ ಕಳೆ ಕಾಣಿಸಿತು. ಆಗ ಯಾರಾದರೂ ಕಂಡಿದ್ದರೆ ಆತನೊಬ್ಬ ಕರ್ತವ್ಯನಿಷ್ಠ ವ್ಯಕ್ತಿಯೆಂದು ಹೇಳುವಂತಿತ್ತು. ಅಲ್ಲದೆ ಆತನ ಬಗ್ಗೆ ಶ್ರದ್ಧೆ ಉತ್ಪನ್ನವಾಗುತ್ತಿತ್ತು. ಆದರೂ ಅಂತಹ ವ್ಯಕ್ತಿಗಳಿಗೂ ಜೀವನದಲ್ಲಿ ಎಡವಿ ಬೀಳುವುದು ತಪ್ಪಿದ್ದಲ್ಲ.

ಕೆಲಸ ಮುಗಿದೊಡನೆಯೇ ಸ್ವಿಚ್ ಒತ್ತಿ ದರ್ಶನ ಗ್ರಂಥವೊಂದನ್ನು ಓದಹತ್ತಿದ. ಆತ ಒಂದು ನಿಮಿಷವನ್ನೂ ವ್ಯರ್ಥವಾಗಿ ಹೋಗಗೊಡು ತ್ತಿದ್ದಿಲ್ಲ. ಅಷ್ಟರಲ್ಲಿ ಕುಮುದೆಯು ಬಂದು ''ಊಟಕ್ಕಣಿಯಾಗಿದೆ, ಊಟ ತೀರಿಸಿ ಹೋಗಲು ಹೇಳಿದ್ದಾರೆ'' ಎಂದು ಬಿನ್ನವಿಸಿದಳು.

''ಇನ್ನು ಊಟದ ಹೊತ್ತಾಗಿಲ್ಲ. ೫೦ ನಿಮಿಷವಿದೆ.''

''ನಾನವರಿಗೆ ಹಾಗೆಯೇ ತಿಳಿಸಲೇ?''

''ಹೌದು. ಆ ಅಬ್ದುಲ್ಲನಿರದ್ದರಿಂದಲೇ ಇಷ್ಟೆಲ್ಲ ತೊಂದರೆ.''

ದಾಸಿ ಹೋಗುವುದರಲ್ಲಿದ್ದಳು. ''ಬೇಡ, ಹಾಕಿದುದನ್ನು ತೆಗೆವು ದೆಂದರೆ ಅಷ್ಟೇ ತ್ರಾಸು. ನಾನೇ ಬರುತ್ತೇನೆಂದು ಹೇಳು'' ಎಂದು ದಾಸಿ ಯನ್ನು ಕರೆದು ಹೇಳಿದನು.

ಇಂದು ಊಟಮಾಡುವಲ್ಲಿ ಎಂದಿನಂತೆ ಮೇಜು ಖುರ್ಚಿ ಇರಲಿಲ್ಲ. ಮಲಗುವ ಕೋಣೆಗೆ ಹೊಂದಿರುವ ಕೋಣೆಯಲ್ಲಿಯೇ ಮಣೆ ಹಾಕಲಾಗಿತ್ತು. ಅಡಿಗೆ ದೇಶೀ ಪದ್ಧತಿಯದು. ಹಿಂದಿನ ಗ್ಲಾಸು, ಫೋರ್ಕು,—ಇವಾವುದೂ ಅಲ್ಲಿರಲಿಲ್ಲ. ಪಾತ್ರೆಗಳಲ್ಲಿ ತಯಾರಿಸಿದ ತರತರದ ಅಡಿಗೆಯಿಂದ ಕಂಪು ಹರಡಿತ್ತು ಎದುರಿಗೇ ಉಷೆ ಕುಳಿತಿದ್ದಳು. ಅವಳ ಹತ್ತಿರವೇ ಸೋಮೇಂದ್ರ ಕುಳಿತಿದ್ದ.

''ನೀನೇನೂ ನನ್ನ ಜೊತೆಗೆ ಕೂಡುವಂತಿಲ್ಲ. ಆದರೆ ಸೋಮೇಂದ್ರ ನಿಗಾದರೂ ಈಗ ಬಡಿಸಬಾರದೇ?''

ಉಷೆಗೆ ಉತ್ತರ ಕೊಡುವ ಅವಶ್ಯಕತೆ ಬೀಳಲಿಲ್ಲ. ಸೋಮೇಂದ್ರನೇ ತಾಯಿಯ ಜೊತೆಗೆ ಊಟಮಾಡುವುದಾಗಿ ಹೇಳಿದ.

''ಈ ಅಡಿಗೆ ನೀನೇ ಮಾಡಿದೆಯಾ?''

''ಹೂಂ.''

''ಇನ್ನೇನು? ಅಡಿಗೆಯವನ ಹೊಟ್ಟೆಯ ಮೇಲೂ ಕಾಲಿಂದು ತೋರು ತ್ತಿದೆ. ಅವನ ಸಂಬಳವೂ ಬಾಕಿ ಇತ್ತು. ಅದನ್ನು ಕೊಟ್ಟು ಆತನಿಗೂ ಕಳಿಸಿದೆಯಾ?''

'ನೌಕರರಿಗೆ ಒಮ್ಮೊಮ್ಮೆ ಮುಂಗಡ ಹಣಕೊಡಬೇಕಾದ ಸಂದರ್ಭ ಗಳೂ ಬರುತ್ತವೆ. ಬಾಕಿ ಇಟ್ಟುಕೊಳ್ಳುವುದರಿಂದಲೇ ಕೆಲಸ ನೀಗದು. ಆದರೆ ಅಡಿಗೆಯವನನ್ನೇನೂ ಕಳಿಸಿಲ್ಲ. ಅವನನ್ನು ಕರೆಸಬೇಕೇ?''

''ಬೇಡ, ಬೇಡ, ಅಷ್ಟೇನೂ ಅವಸರವಿಲ್ಲ. ಒಮ್ಮೊಮ್ಮೆ ಅವನಿಗೂ ಅಡಿಗೆ ಮಾಡಲಿಕ್ಕೆ ಹೇಳು. ಇಲ್ಲವಾದರೆ ಎಲ್ಲ ಮರೆತೇ ಬಿಡುವ. ಪಾಪ! ಬಡವ! ಮುಂದೆ ಅಡಿಗೆಯ ಕೆಲಸವನ್ನೂ ಮರೆತನೆಂದರೆ ಆತನದೇ ಹಾನಿ ಯಾದೀತು.''

ಇಂದಿನ ಅಡಿಗೆಯ ರುಚಿಯೋ ಬೇರೆ ತೆರನಾಗಿತ್ತು. ಆತನಿಗೆ ತಾಯಿಯ ನೆನವು ಬಂದಿತು. ಹತ್ತಿರದಲ್ಲಿದ್ದ ಪರಾತದಿಂದ ಒಂದು ಬಗೆಯ

ಸುವಾಸನೆ ಇಡಗುತ್ತಿತ್ತು. ಆ ಜನ ಮಾಂಸ ತಿನ್ನುವವರಲ್ಲ; ಆದರೆ ಕಾಯಿಪಲ್ಯಕ್ಕೆ ಮಸಾಲೆ ಹಾಕಿ ಮಾಂಸದ ಪಲ್ಯದಂತೆಯೇ ತಯಾರಿಸುತ್ತಾರೆ.

"ನನಗೆ ಇಂತಹ ಸೋಗಿನ ಮಾಂಸಬೇಡ. ನಿಜವಾದ ಮಾಂಸವೇ ಬೇಕು" ಎಂದು ಶೈಲೇಶನೆಂದ.

"ಒಮ್ಮೆ ತಿಂದಾದರೂ ನೋಡಿದರಾಗದೇ?"

ಶೈಲೇಶ ಅದನ್ನು ಬಾಯಿಗಿಟ್ಟ. "ಅಲ್ಲ; ಇದು ಮಾಂಸವೇ? ತರಕಾರಿಯೆಂದೇ ತಿಳಿದಿದ್ದೆ. ಅಲ್ಲ! ಎಷ್ಟು ಚೆನ್ನಾಗಿ ತಯಾರಿಸಿರುವೆಯೇ? ಇದನ್ನೆಲ್ಲ ಎಲ್ಲಿ ಕಲಿತೇ?"

"ನಿಮ್ಮ ಅಬ್ದುಲ್ಲನಿಗೊಂದೇ ಅಡಿಗೆ ಮಾಡಲು ಬರುತ್ತದೆಂದು ತಿಳಿದಿದ್ದಿರಾ?"

"ಈ ಅಡಿಗೆಯ ರುಚಿ ನೋಡಿದಮೇಲೆ ಯಾರೂ ಹೀಗೆ ಅಭಿಪ್ರಾಯ ಪಡಲಾರರು. ಅನುದಿನವೂ ಇಂತಹ ಅಡಿಗೆ ಸಿಗಲು ಪುಣ್ಯ ಬೇಕು."

"ಅದಕ್ಕೇನಡ್ಡಿ? ಯಾವ ತೊಂದರೆ ಇದೆ ಹೇಳಿ."

"ಈ ಅಡಿಗೆಯುಂಡು ಅಬ್ದುಲ್ಲನಿಲ್ಲಪಲ್ಲ ಎಂಬ ಶಂಕೆಯಂತೂ ದೂರವಾಯಿತು. ಆದರೆ ತೀರದ ಸಾಲವೊಂದಿದೆಯಲ್ಲ!"

"ಸಾಲಕ್ಕಾಗಿ ಹೊಟ್ಟೆಗೂ ತಿನ್ನಲಾಗದೆಂದು ಯಾರು ಹೇಳಿದ್ದಾರೆ? ಅದರ ಚಿಂತೆ ನಿಮಗೆ ಬೇಡ. ತಿನ್ನುಣ್ಣುವುದರಿಂದಲೇ ಇಷ್ಟೊಂದು ಸಾಲವಾಗಿಲ್ಲ?

"ಉಷಾ, ಏನು ಹೇಳಲಿ? ನನಗಿಷ್ಟೊಂದು ಸಾಲ ಹೇಗೆ ಆಗಿದೆಯೆಂದು ನಾನೇ ಹೇಳಲಾರೆ."

"ಆ ಮಾತು ಇರಲಿ. ಅದನ್ನೆಲ್ಲ ನಾನು ನೋಡಿಕೊಳ್ಳುವೆ"

ಶೈಲೇಶ ಮರುಮಾತಾಡದೆ ಊಟಮಾಡತೊಡಗಿದ.

ಸೋಮೇಂದ್ರನೇ ಮಾತಿಗೆ ಮೊದಲಿಟ್ಟ. "ಅಮ್ಮಾ, ನಿನ್ನೆಯ ಕತೆ ಹೇಳಿದ ಹೊರತು ನಾನು ಉಣ್ಣುವಂತಿಲ್ಲ; ಹೂಂ, ಜಟಾಯುವಿನ ಕತೆ ಹೇಳಿದ್ದೆಯಲ್ಲ; ಜಟಾಯುವಿನ ಮಗ ಏನು ಮಾಡಿದ?"

"ಜಟಾಯುವಿನ ಮಗ ಏನಾದರೂ ಮಾಡಿರಬಹುದು. ಆದರೆ ಈ ಮಗ ಮಾತ್ರ ನಿನ್ನನ್ನು ಬಿಟ್ಟಿರುವಂತೆ ಕಾಣುವದಿಲ್ಲ. ಇದರ ಕಾರಣವೇನು ?"

"ಅದಕ್ಕೇನು ಅಂತಹ ಬಲವಾದ ಕಾರಣವಿರಲಾರದು. ಪಾಪ ! ತಾಯಿಲ್ಲದ ತಬ್ಬಲಿ. ಮನೆಯಲ್ಲಿ ಇನ್ನಾರೂ ಇಲ್ಲ."

"ಅದೆಲ್ಲ ನಿಜ. ಆದರೆ ತಾಯಿಯನ್ನು ಸಹ ಆತ ಈ ಪರಿ ಪ್ರೀತಿಸುತ್ತಿರಲಿಲ್ಲ !"

"ಆ ಮಾತು ಇರಲಿ ನಿಮಗೇನು ? ಒಂದೇ ಸುದ್ದಿ. ತುಸು ಮಾಂಸ ತರಲು ಹೇಳಲೇ ? ಬೇರೇನೂ ತೆಗೆದುಕೊಳ್ಳದಿದ್ದರೂ ಅಡ್ಡಿಯಿಲ್ಲ. ಈ ಮಿಠಾಯಿಯನ್ನು ಮಾತ್ರ ಬಿಟ್ಟು ಏಳಬೇಡಿ. ನನ್ನಾಣೆ ಇದೆ; ದಿನವೆಲ್ಲ ಊಟಮಾಡಿಲ್ಲ."

ಶೈಲೇಶ ಉಷೆಯನ್ನೇ ದಿಟ್ಟಿಸುತ್ತ ಕುಳಿತ. ಊಟಕ್ಕಾಗಿ ಈ ರೀತಿಯ ಬಲುವೆ—ಊಟ ಮಾಡದಿದ್ದರೆ ಪಡುವ ಸಂಕಟ—ಇವೆಲ್ಲ ಹಿಂದಿನ ದಿನಗಳ ಸವಿನೆನಪನ್ನುಂಟುಮಾಡುತ್ತಿತ್ತು. ಶೈಲೇಶ ತಾಯಿಗೆ ಒಬ್ಬನೇ ಮಗ. ಬಾಲ್ಯಕಾಲದ ವಾತ್ಸಲ್ಯದ ತೋಯ ತರಂಗಗಳಲ್ಲಿ ತೇಲಾಡಿದ ನೆನಪಾಗಿ ಹೃದಯ ತುಂಬಿ ಬಂತು. ಕಜ್ಜಾಯ ಬಿಟ್ಟೇಳಲು ಮನಸ್ಸು ಬರಲಿಲ್ಲ.

"ಉಷಾ, ಇನ್ನು ಮುಂದೆ ನಾನು ಯಾವ ಲೆಕ್ಕ ಇಡುವ ಗೋಜಿಗೂ ಹೋಗುವದಿಲ್ಲ. ಎಲ್ಲ ಭಾರವೂ ನಿನ್ನದೇ" ಎಂದು ಹೇಳಿ ಎದ್ದನು.

೬

ನೋಡನೋಡುತ್ತಲೇ ವಾರವೊಂದು ಉರುಳಿತು. ರವಿವಾರ ಬಂದಿತು. ಶೈಲೇಶನಿಗೆ ಅದರ ಎಚ್ಚರವೇ ಇರಲಿಲ್ಲ. ಉಷೆಯು ನಸುಕಿನಲ್ಲಿಯೇ "ನೀವು ಒಮ್ಮೆ ವಿಭಾ ಇದ್ದಲ್ಲಿ ಹೋಗಿ ಬರಬಾರದೇ ? ಆಕೆ ಏನು ತಿಳಿದುಕೊಂಡಿರುವಳೋ ಏನೋ ? ನಾನು ದಿನಾಲು ನೆನಪು ಮಾಡುತ್ತಲೇ ಇದ್ದೇನೆ. ಆದರೂ ನೀವು ಹೋಗಿಲ್ಲ. ನಮ್ಮಿಬ್ಬರಲ್ಲಿ ಜಗಳ ಹಚ್ಚಬೇಕೆಂದು ಮಾಡಿರುವಿರಾ ?" ಎಂದು ಕೇಳಿದಳು.

" ಏನು ಮಾಡಲಿ ? ಕಾಲೇಜಿನ ಕೆಲಸ. ಬಿಡುವೆಂಬುದೇ ಇಲ್ಲ. "

" ಅದನ್ನೆಲ್ಲ ಬಲ್ಲೆ. ಕಾಲೇಜು ಬಿಟ್ಟ ಮೇಲೆ ಅದೇ ದಾರಿಯಿಂದ ಏಕೆ ಹೋಗಿ ಬರಬಾರದು ?"

" ತಿರುಗಿ ಬರುವಾಗ ನನಗೆಷ್ಟು ಆಯಾಸವಾಗುತ್ತಿದೆಯೆಂದು ನೀನೇನು ಬಲ್ಲಿ ? ಎಂದಾದರೂ ಹುಡುಗರಿಗೆ ಪಾಠ ಹೇಳಿದ್ದರೆ ಆಗ ಗೊತ್ತಾಗುತ್ತಿತ್ತು ಅದರ ಕಷ್ಟ ! "

" ದಮ್ಮಯ್ಯ, ನಿಮ್ಮ ಕಾಲಿಗೆ ಬೀಳುತ್ತೇನೆ. ರವಿವಾರವೂ ಬಹಳ ಕಲಿಸುತ್ತೀರೆಂದು ಬಲ್ಲೆ." ಎಂದು ಆಳಿಗೆ ಕರೆದು ಗಾಡಿಯನ್ನು ಸಿದ್ಧಪಡಿಸಲು ಆಜ್ಞಾಪಿಸಿದಳು.

ಶೈಲೇಶ ಹೋಗುವಾಗ ಮಗನಿಗೂ ಬಾರೆಂದು ಕರೆದ. ಆದರೆ ಮಗ ಒಪ್ಪಲಿಲ್ಲ. ಆತ ಮಲತಾಯಿಯ ಮೈಗಾನಿಸಿ ನಿಂತ. ಅತ್ತೆಯ ಮನೆಗೆ ಹೋಗಲು ಆತನಿಗೆ ಉತ್ಸಾಹವಿರಲಿಲ್ಲ ಹಿಂದಿನ ಘಟನೆಯ ನೆನಪಾಗಿ ಅಂಜಿದ. ಉಷೆಯು ಆತನನ್ನು ಎದೆಗವಚಿಕೊಂಡು " ಸೋಮೇಂದ್ರ ಇಲ್ಲಿಯೇ ಇರಲಿ. ಇನ್ನೊಂದಾದರೂ ಹೋಗುವನಂತೆ " ಎಂದು ನಗನಗುತ್ತ ಒಳಹೋದಳು

ಶ್ಯಾಮಬಾಜಾರಿನಿಂದ ಶೈಲೇಶ ಮರಳಿದಾಗ ಎರಡೂವರೆ ಘಂಟೆಯಾಗಿತ್ತು. ಆತನ ಜೊತೆಗೆ ವಿಭಾ, ಕ್ಷೇತ್ರಮೋಹನ, ಆತನ ತಂಗಿ ಬಂದಿದ್ದರು. ಶೈಲೇಶನಿಗೆ ವಿಭಾಳನ್ನು ಸಂಗಡ ಕರೆದುಕೊಂಡು ಬರುವ ಇಚ್ಛೆಯಿದ್ದಿಲ್ಲ. ಆಕೆ ತಾನಾಗಿಯೇ ಬಂದಿದ್ದಳು. ಉಷೆಯ ಮೇಲೆ ಆಕೆಯ ಅನೇಕ ಆರೋಪಗಳಿದ್ದವು. ಅಣ್ಣನ ಮೇಲೂ ಅಷ್ಟೇ ಹರಿಹಾಯ್ದಿದ್ದಳು. ತನ್ನಷ್ಟು ಕಲಿಯದ, ಹಳ್ಳಿಯ ಕುಸಂಸ್ಕಾರದಲ್ಲಿ ಬೆಳೆದ ಉಷೆಯನ್ನು ನಾಲ್ಕು ಮಂದಿಯ ಮುಂದೆ ಹೀನಾಯ ಮಾಡಲೆಂದು ಬಂದಿದ್ದಳು.

ಇಷ್ಟೊತ್ತಿನ ತನಕವೂ ಆಕೆ ಅಣ್ಣನ ಕಿವಿ ತುಂಬಿದುದು ಒಂದೇ ಒಂದು ಮಾತು. " ಆಕೆಯನ್ನು ತಂದು ಜನರಿಗೆ ಆಡಿಕೊಳ್ಳಲು ಹಾದಿ ಮಾಡಿದೆ. ಇಷ್ಟೊಂದು ದಿನ ಆಕೆ ಹೆರವರಲ್ಲಿದ್ದವಳು. ಅವಳನ್ನು ನೀನು ಹೊರಹಾಕಿದವನಲ್ಲ; ನಿನ್ನ ಹಿರಿಯರು. ಈಗ ಅವಳನ್ನು ಕರೆತಂದು ನೀನು ಹಿರಿಯರಿಗೆ ಅವಮಾನ ಪಡಿಸಿದೆ. ಆ ಕಲಂಕವನ್ನು ನೀನು ತೊಡೆದು

ಹಾಕಬೇಕು. ಇಷ್ಟೆಲ್ಲ ಅರಿಷ್ಟಕ್ಕೆ ಆಕೆಯೇ ಕಾರಣ. ಅಲ್ಲದೆ ನಮ್ಮಂತಹ ಘನವಂಶದಲ್ಲಿರಲು ಆಕೆ ಯೋಗ್ಯಳಲ್ಲ ಈಕೆ ನನ್ನ ಅಣ್ಣನ ಹೆಂಡತಿಯೆಂದು ನಮ್ಮ ಗೆಳೆಯರಲ್ಲಿ ಇಲ್ಲವೆ ಪರಿಚಿತರಲ್ಲಿ ಹೇಳಿಕೊಳ್ಳಲಿಕ್ಕೂ ನಾಚಿಕೆಯೆನಿಸುತ್ತಿದೆ. ಮೋಜವಾನಿ ಗೀಜವಾನಿ-ಸಭೆ ಸಮಾರಂಭಗಳಿಗೆ ಕರೆದುಕೊಂಡು ಹೋಗುವದಾದರೂ ಹೇಗೆ? ಇಂತಹ ಕೀಳು ಸಂಸ್ಕೃತಿಯುವಳನ್ನು ನನ್ನವಳೆಂದು ಹೇಗೆ ಕರೆಯಲಿ ? ''

ಕ್ಷೇತ್ರಮೋಹನನಿಗೆ ಉಷೆಯ ಪರಿಚಯ ಎಳ್ಳಷ್ಟೂ ಇರಲಿಲ್ಲ. ಆದರೂ ಆಕೆಯ ಪತಿಯಿಂದ ಒಂದೆರಡು ಮಾತಾಡಿದ. ಆದರೆ ಹೆಂಡತಿಯ ಆರ್ಭಟದ ಮುಂದೆ ಆತನ ಆಟ ನಡೆಯಲಿಲ್ಲ.

'' ನನಗೇನೂ ತಿಳಿಯದೆಂದು ಅಣ್ಣ ಭಾವಿಸಿರಬೇಕು ; ನಾನು ಬೇರು ಬೇರು ಬಲ್ಲೆ. ಮನೆಯಲ್ಲಿ ಕಾಲಿಟ್ಟವಳೇ ಅಬ್ದುಲ್ಲ ಮುಸಲ್ಮಾನನೆಂದು ಹೊರಹಾಕಿದಳು. ಕೀಳು ಕುಲದವನೆಂದು ಗಿರಿಧಾರಿಯೂ ಹೊರಬೀಳಬೇಕಾಯಿತು. ಇಂತಹ ಜಾತಿಭೇದವೆಣಿಸುವವರೊಡನೆ ನಾವು ಯಾವುದೇ ರೀತಿಯ ಸಂಬಂಧವನ್ನೂ ಇಟ್ಟುಕೊಳ್ಳಲಾರೆವು. ಇದರಿಂದ ಯಾರಿಗೆ ಬೇಸರವಾದರೂ ಚಿಂತೆಯಿಲ್ಲ. ''

ಯಾರನ್ನು ಉದ್ದೇಶಿಸಿ ಈ ಮಾತು ಆಡುತ್ತಾಳೆಂದು ಎಲ್ಲರಿಗೂ ತಿಳಿಯಿತು. ಆಗ ಶೈಲೇಶನೇ ನಾವಕಾಶವಾಗಿ '' ಅಬ್ದುಲ್, ಗಿರಿಧಾರಿಯರನ್ನು ತೆಗೆದುಹಾಕಿದುದು ಅವರ ಜಾತಿಯ ಸಲುವಾಗಿಯಲ್ಲ. ಅವರೇ ತಂತಮ್ಮ ಮನೆಗೆ ಹೋಗಿ ಬರಲು ಆತುರರಾಗಿದ್ದರು '' ಎಂದನು.

ಅಣ್ಣನ ಈ ಮಾತಿನಿಂದ ಆಕೆ ಶಾಂತಳಾಗಲಿಲ್ಲ ಸ್ವಲ್ಪವೂ ದಾಕ್ಷಿಣ್ಯವಿಲ್ಲದೆ '' ಪಾಪ, ಇಷ್ಟೊಂದು ದಿನ ಅವರಿಗೆ ಮನೆಯ ಎಚ್ಚರವೇ ಇರಲಿಲ್ಲ. ಈ ಕಲಿ ಮನೆ ಹೊಕ್ಕೊಡನೆಯೇ ಅವರಿಗೆಲ್ಲ ಮನೆಯ ಕಾಳಜಿ ಹತ್ತಿ ಓಡಿಯೇ ಹೋದರೆಂದು ಕಾಣುತ್ತಿದೆ. ''

ಇಂತಹ ವ್ಯಂಗ್ಯಕ್ಕೆ ಏನೆಂದು ಉತ್ತರ ಕೊಡಬಹುದು ? ಆತ ಮೌನವಾಗುಳಿದ.

'' ನೌಕರರೆಲ್ಲ ಓಡಿಹೋದ ಮೇಲೆ ಕೆಲಸ ಹೇಗೆ ನಡೆಯುತ್ತಿದೆ? ''

'' ಹೇಗಾದರೂ ನಡೆಯುತ್ತಿದೆ. ''

"ಹೋದ ನೌಕರರು ಮರಳಿ ಬರುವಂತೆ ನನಗೇನೂ ಕಾಣುವದಿಲ್ಲ. ಮನೆಯನ್ನೇನು ಪುರೋಹಿತರ ಮನೆಯಂತೆ ಮಾಡುವ ಯೋಚನೆಯೋ? ಸಮಾಜದಲ್ಲಿರುವುದಾದ ಮೇಲೆ ಜನ ಮೆಚ್ಚುವಂತೆ ನಡೆಯಬೇಕು. ಇನ್ನಾರನ್ನಾದರೂ ಹುಡುಕಿಕೊಳ್ಳಿ. ಹೀಗೆ ಮಾಡಿದರೆ ಜನವೆಲ್ಲ ಏನೆಂದಾರು?"

"ಕೆಲಸ ಸಿಗದಿದ್ದರೆ ಆಳನ್ನು ಇಟ್ಟುಕೊಳ್ಳಲೇ ಬೇಕಾದೀತು."

"ಕೆಲಸ ಹೇಗೆ ನಿರ್ವಹಿಸುತ್ತೀರೋ ನಿಮಗೇ ಗೊತ್ತು. ನಮಗೆ ತಿಳಿಯದು. ತಂದೆಯ ಮನೆಯಿಂದು ಬಂದರೆ ಒಂದು ಕಪ್ಪು ಚಹಾಕ್ಕೂ ತತ್ವಾರ."

ಕ್ಷೇತ್ರಮೋಹನ ಅಣ್ಣತಂಗಿಯರ ಮಾತಿನಲ್ಲಿ ನಡುವೆ ಬಾಯಿಹಾಕುವದು ತರವಲ್ಲವೆಂದು ಸುಮ್ಮನಿದ್ದ. ಆದರೆ ಈಗ ಸುಮ್ಮನಿರಲು ಸಾಧ್ಯವಾಗಲಿಲ್ಲ.

"ಮೊದಲೊಮ್ಮೆ ಹೋಗಿಯಾದರೂ ಹೋಗುವಾ. ಈಯುವ ಕೋಳಿಯ ಮೊಟ್ಟೆಗಳನ್ನು ಮೊದಲೇ ಲೆಕ್ಕಮಾಡುವದೇಕೆ?"

"ಅಗುಳು ಹಿಚುಕಿದರೆ ಅನ್ನದ ಲಕ್ಷಣ ಗೊತ್ತಾಗಲಾರದೇ? ಬಂದ ದಿವಸವೇ ನೋಡಿದ್ದೇನೆ—ಎಲ್ಲ" ಎಂದವಳೇ ವಸ್ತ್ರ ಬದಲಿಸಲು ಹೊರಟು ಹೋದಳು.

ವಿಭಾಳ ದೂರು ಎಷ್ಟು ಮಾತ್ರಕ್ಕೂ ನಿಜವಾದುದಿರಲಿಲ್ಲ. ಆಕೆ ಉಷೆಯ ಜೊತೆಗೆ ಇದ್ದುದು ಕೆಲವೇ ನಿಮಿಷ. ಅಲ್ಲಿಯ ವ್ಯವಸ್ಥೆ ನೋಡುವ ಇಚ್ಛೆಯಾಗಲೀ ತಾಳ್ಮೆಯಾಗಲೀ ಆಕೆಗಿರಲಿಲ್ಲ. ಆದರೆ ಶೈಲೇಶನಿಗಾಗಲಿ, ಕ್ಷೇತ್ರಮೋಹನನಿಗಾಗಲಿ ಏನೊಂದೂ ಗೊತ್ತಿಲ್ಲ.

"ಶೈಲೇಶ, ನಿಜವಾಗಿ ನಡೆದದ್ದಾದರೂ ಏನು? ಆಳಿಗೆಲ್ಲ ಹೊರಹಾಕಿ ಒಮ್ಮೆಲೇ ಸನ್ಯಾಸಿಯಾಗುವ ಯೋಚನೆಯೇ! ಈಗ ಅಡಿಗೆಯನ್ನು ಯಾರು ಮಾಡುತ್ತಾರೆ" ಎಂದು ಕ್ಷೇತ್ರಮೋಹನನು ಕೇಳಿದನು.

"ದಿನಾಲು ಜೇಳೆ—ಅನ್ನ, ಕಾಯಿಪಲ್ಯ ತಯಾರಿಸುತ್ತಾರೆ. ಅದನ್ನೇ ಉಣ್ಣುತ್ತೇನೆ."

"ಗಂಟಲಲ್ಲಿ ಸರಿಯಾಗಿ ಇಳಿಯುತ್ತದೆಯೆ?"

"ಸರಿಯಾಗಿ ಇಳಿಯುವುದರಲ್ಲಿ ಸಂದೇಹವಿಲ್ಲ."

"ಅದು ನನಗೂ ಗೊತ್ತು. ಅಲ್ಲದೆ ಶಾಕಾಹಾರ ನನಗೆ ಸೇರುವದಿಲ್ಲ ವೆಂದಲ್ಲ; ಆದರೆ ಶಾಕಾಹಾರದಿಂದಲೇ ಶರೀರಕ್ಕೆ ಬೇಕಾದ ಪೋಷಕದ್ರವ್ಯ ಸಿಕ್ಕೀತೆಂದು ಮಾತ್ರ ಒಪ್ಪಲಾರೆ. ಹೀಗೆಯೇ ಜೀವನ ಕಳೆಯಲು ನಿರ್ಧರಿಸಿರುವೆಯಾ?"

"ನಿಜವಾಗಿ ನಾನಾವ ಯೋಚನೆಯನ್ನೂ ಮಾಡಿಲ್ಲ. ಮನೆತನದ ವ್ಯವಹಾರದಲ್ಲಿ ಯಾವುದೇ ರೀತಿಯಿಂದ ಕೈಹಾಕಬಾರದೆಂದು ಬಗೆದಿರುವೆ."

"ಈ ಮಾತು ನಿನ್ನ ತಂಗಿಯ ಕಿವಿಗೆ ಬೀಳದಂತೆ ಜಾಗರೂಕನಾಗಿರು."

"ತಂಗಿಯ ಹೇಳಿಕೆಗೆ ಕಿವಿಗೊಡಹತ್ತಿದರೆ ಕೆಲಸ ಸಾಗದು. ಸುಖವು ಸ್ಥಾಯಿಯಾದೀತೆಂಬ ಆಸೆ ಕಾಣುತ್ತಿದೆ. ಉತ್ಪನ್ನಕ್ಕಿಂತ ವೆಚ್ಚ ಹೆಚ್ಚಾದೀತೆಂಬ ಭಯವಿಲ್ಲ. ಸಾಲವಾದುದರಿಂದ ಹಗಲಿರುಳೂ ಅದೇ ಚಿಂತೆಯಾಗಿತ್ತು. ಹದಿನೈದು ತಾರೀಕಾಗುವದರೊಳಗೇ ಕೈ ಖಾಲಿ. ಉಳಿದ ಹದಿನೈದು ದಿನ ಹೇಗೆ ಕಳೆಯುತ್ತಿದ್ದೆನೋ ದೇವರೇ ಬಲ್ಲ! ಈಗ ಕಂಡಕಂಡವರ ಹತ್ತಿರ ಕೈಗಡ ಕೇಳುತ್ತ ತಿರುಗುವ ಪ್ರಸಂಗವಿಲ್ಲ. ಈಗ ಸಿಕ್ಕ ವೇತನವೇ ಸಾಕಾಗುತ್ತದೆ. ಅದರಿಂದ ಸುಖವಾಗಿರುವೆ."

"ಹಣದ ಚಿಂತೆಯಿಂದ ದುಃಖಿತನಾದವನು ನೀನೊಬ್ಬನೇ ಅಲ್ಲ; ನನ್ನ ಅವಸ್ಥೆ ನಾಯಿಪಾಡು."

"ಇಲ್ಲಿಂದ ಪ್ರಯಾಗಕ್ಕೆ ಹೋಗುವಾಗ ಒಂದು ತಿಂಗಳ ಸಂಬಳ ಇಟ್ಟು ಇಷ್ಟರಿಂದಲೇ ಹೇಗಾದರೂ ತಿಂಗಳು ದೂಡಲು ಹೇಳಿಹೋಗಿದ್ದೆ. ಮೊದಲಿಂದೂ ಅಷ್ಟು ಹಣ ಸಾಕಾಗಿರಲೇ ಇಲ್ಲ. ಸೋಮೇಂದ್ರನ ತಾಯಿ ಬದುಕಿದ್ದಾಗಲೂ ಸಾಲವಾಗುತ್ತಿತ್ತು. ಆಕೆ ತೀರಿಕೊಂಡ ಮೇಲೂ ಅದೇ ಹಾಡು. ಆ ಇಬ್ಬರು ನೌಕರರನ್ನು ತೆಗೆದುಹಾಕಿದ್ದರಿಂದ ಅಪ್ರಸನ್ನರಾಗಿ ಮನೆಗೆ ಹೋಗಿದ್ದಾರೆಂದು ನನಗೆ ಅನಿಸುವದಿಲ್ಲ. ಅವರಿಗೆ ಒಂದು ವರ್ಷದ ಪೂರಾ ಸಂಬಳ ಕೊಟ್ಟದ್ದರಿಂದ ಸಂತೋಷವಾಗಿ ಮನೆಗೆ ಹೋಗಿದ್ದಾರೆ. ಸೆಟ್ಟಿಯ ಅಂಗಡಿಯಲ್ಲಿ ನಾನ್ನೂರು ರೂಪಾಯಿ ಸಾಲವಿತ್ತು. ಅದನ್ನೆಲ್ಲ ತೀರಿಸಿದುದಲ್ಲದೆ ಸಣ್ಣಪುಟ್ಟ ಸಾಲವನ್ನೂ ತೀರಿಸಲಾಯಿತು. ಪ್ರತಿಯೊಂದು ಪೈ ಪೈಯ ಲೆಕ್ಕವನ್ನೆಲ್ಲ ಇಟ್ಟಿದ್ದಾಳೆ. ಆ ಲೆಕ್ಕ ನೋಡಿ ನನ್ನ ಕಣ್ಣು

ತಿರುಗಿತ್ತು. ಅದಕ್ಕಾಗಿ ಗಾಬರಿಯಾಗಿ 'ಉಷಾ, ಇನ್ನೂ ಹದಿನೈದು ದಿನವಾಗಿಲ್ಲ, ಇಷ್ಟೆಲ್ಲ ಖರ್ಚುಮಾಡಿದರೆ ಮುಂದೇನು ಗತಿ?' ಎಂದು ಕೇಳಿದೆ. ಅದಕ್ಕೆ ಆವಳು 'ನಾನೇನು ಅರಿಯದ ಹುಡುಗಿಯಲ್ಲ: ಅಷ್ಟು ತಿಳುವಳಿಕೆ ನನಗಿದೆ' ಎಂದಳು ಅಷ್ಟೇ ಅಲ್ಲದೆ ಊಟೋಪಚಾರದಲ್ಲಿಯೂ ನನಗಾವ ತೊಂದರೆಯೂ ಕಂಡುಬಂದಿಲ್ಲ. ಆ ಅನ್ನಬೇಳೆಯೇ ಅಮೃತದಂತೆ ರುಚಿಕರವಾಗಿದೆ."

"ನಾನು ಇನ್ನೆರಡು ದೊಡ್ಡ ಸಾಲ ತೀರಿಸುವದಿದೆ. ಒಂದು ಪ್ರೊನೋಟಿನ ಮೇಲೆ ತಂದ ಎರಡು ಸಾವಿರ ರೂಪಾಯಿ. ಇನ್ನೊಂದು ಸಿಂಪಿಗರ ಸಾಲ. ಇವೆರಡು ತೀರಿತೆಂದರೆ ನನ್ನ ಕೈಹಿಡಿಯುವವರಿನ್ನಾರೂ ಇಲ್ಲ."

ಕ್ಷೇತ್ರಮೋಹನ ಮಾತಾಡಲು ಬಾಯಿ ತೆಗೆದಿದ್ದ. ಆದರೆ ವಿಭಾಳು ಬರುತ್ತಿದ್ದುದುದರಿಂದ ಸುಮ್ಮನುಳಿದ. ಅಷ್ಟರಲ್ಲಿ ಮೋಟರು ಸಿದ್ಧವಾದುದರಿಂದ ನಾಲ್ವರೂ ಕುಳಿತರು.

ಕ್ಷೇತ್ರಮೋಹನ ವಿಚಾರಮಗ್ನನಾಗಿದ್ದುದರಿಂದ ದಾರಿಯಲ್ಲಿ ಯಾರ ಮಾತೂ ಆತನ ಕಿವಿಗೆ ಹೋಗಲಿಲ್ಲ.

## ೭

ಕೆಲಹೊತ್ತಿನಲ್ಲಿಯೇ ಶೈಲೇಶನ ಮನೆಯ ಮುಂದೆ ಮೋಟರು ಬಂದು ನಿಂತಿತು. ಮೊದಲು ಸೋಮೇಂದ್ರ ಕಣ್ಣಿಗೆ ಬಿದ್ದ. ಆತ ತನ್ನ ಅಡಿಗೆಯನ್ನು ಸರಿಪಡಿಸುವುದರಲ್ಲಿ ಮಗ್ನನಾಗಿದ್ದ. ಅವನ ರೂಪು ಕಂಡು ಯಾರ ಬಾಯಿಂದಲೂ ಮಾತು ಹೊರಡಲಿಲ್ಲ.

ಗಂಗಾನದಿಯ ಸ್ನಾನಘಟ್ಟದಲ್ಲಿ ದೇವರ ಮುದ್ರೆಯೊತ್ತುವವರು ಅನೇಕರಿದ್ದಾರೆ. ಅವರ ಹತ್ತಿರ ದೇವರ ಹೆಸರಿನ ಹಾಗೂ ಮೂರ್ತಿಯ ಅನೇಕ ಮುದ್ರೆಗಳಿರುತ್ತವೆ. ಅವುಗಳಿಂದ ಸ್ನಾನಮಾಡಿದವರ ಮೈಮೇಲೆಲ್ಲ ಮುದ್ರೆ ಒತ್ತುತ್ತಾರೆ. ಸೋಮೇಂದ್ರನ ಹಣೆ–ಎದೆ ಹೆಚ್ಚೇನು? ಸರ್ವಾಂಗ

ವಲ್ಲೆಲ್ಲ ಮುದ್ರಾಧಾರಣೆಯಾಗಿದ್ದಿತು. ಎಲ್ಲ ದೇವತೆಗಳೂ ಆತನ ಮೈಮೇ ಕಂಗೊಳಿಸುತ್ತಿದ್ದರು.

ವಿಭಾಳಿಗೆ ನಗು ತಡೆಯಲಾಗಲಿಲ್ಲ. "ಮಗೂ, ನಿನ್ನ ರೂಪ ನೋಡುವಂತಿದೆ. ಚಿರಂಜೀವಿಯಾಗು" ಎಂದು ಹರಸಿದಳು.

ಅಕ್ಕ ಭಾವಂದಿರ ಮುಂದೆ ಶೈಲೇಶನಿಗೆ ನಾಚಿಕೆಯಾಯಿತು. ಶೈಲೇ ಕೋಮಲ ಸ್ವಭಾವದವ. ಸುಮ್ಮಸುಮ್ಮನೆ ಗದ್ದಲ ಮಾಡುವುದು ಆತನ ಪ್ರಕೃತಿಗೆ ಒಗ್ಗದು. ಆದರೆ ತಂಗಿಯ ಈ ಕಟುವ್ಯಂಗ್ಯ ಅಸಹ್ಯವಾಯಿತು ಆ ಸಿಟ್ಟನ್ನು ಮಗನ ಮೇಲೆ ಕಾರಿದ. ಆತನ ಕೆನ್ನೆಗೊಂದು ಏಟು ಬಿಗಿದ "ಹುಚ್ಚಾ, ಇದೆಂತಹ ಹೋಳೀ ಹಬ್ಬ? ಎಲ್ಲಿ ಹೋಗಿದ್ದೆ?" ಎಂದು ಗದರಿದ.

ತಾಯಿಯ ಜೊತೆಗೆ ಗಂಗಾಸ್ನಾನಕ್ಕೆ ಹೋಗಿದ್ದೆನೆಂದು ಆತ ಅಳುತ್ತ ಳುತ್ತ ಹೇಳಿದ. ಶೈಲೇಶ ಆತನಿಗೆ ಇನ್ನೊಂದು ಗುದ್ದಿಕ್ಕಿ ಸಾಬೂನು ಹಚ್ಚಿ ಮೈ ತೊಳೆದುಕೊಂಡು ಬರಲು ಆಜ್ಞಾಪಿಸಿದ.

ಆ ಮೇಲೆ ಮೂವರೂ ದಿವಾಣಖಾನೆಗೆ ಹೋಗಿ ಕುಳಿತರು. ಅಣ್ಣ ತಂಗಿ ಇಬ್ಬರ ಮೋರೆಯೂ ಗಂಭೀರವಾಗಿತ್ತು. ಕೆಲಹೊತ್ತು ಯಾ ಬಾಯಿಂದಲೂ ಮಾತು ಹೊರಡಲಿಲ್ಲ. ಶೈಲೇಶನ ಮೋರೆ ನಾಚಿಕೆ ಯಿಂದ ಮಲಿನವಾಗಿತ್ತು. ಮಗನ ರೂಪು ಈ ರೀತಿಯಾದೀತೆಂದು ಆತ ಕನಸಿನಲ್ಲಿಯೂ ಭಾವಿಸಿರಲಿಲ್ಲ

"ಹೀಗಾಗುವದೆಂದು ನನಗೆ ಮೊದಲೇ ಗೊತ್ತಿತ್ತು" ಎಂದು ವಿಭಾಳು ನುಡಿದಳು.

"ನಿಮ್ಮ ಜೊತೆಗೆ ತಿರುಗಾಡುವದಕ್ಕೂ ಸಂಚಕಾರ ಬಂದಿತು! ಸುಮ್ಮನೆ ಆ ಹುಡುಗನಿಗೆ ಹೊಡೆದು ಸರಸದಲ್ಲಿ ವಿರಸವನ್ನುಂಟು ಮಾಡಿ ದಿರಲ್ಲ!"

ಗಂಡನ ಮಾತು ಕೇಳಿ ವಿಭಾಳಿಗೆ ಅತ್ಯಂತ ವಿಸ್ಮಯವಾಯಿತು. "ಇದೇನು ಹುಡುಗಾಟವೆಂದು ಭಾವಿಸಿದಿರಾ?"

" ಇವರಲ್ಲಾವ ಅಪರಾಧವಾಯಿತು? "

" ಆ— ಅಂದರೆ?"

" ಇಷ್ಟೂ ಗೊತ್ತಾಗುವುದಿಲ್ಲವೇ? ಇಂದಿನ ಗಂಗಾಸ್ನಾನಕ್ಕೆ ಅತಿಶಯ ಮಹತ್ವವಿದೆ. ಅದಕ್ಕಾಗಿ ಸೋಮೇಂದ್ರ ತಾಯಿಯ ಜೊತೆಯಲ್ಲಿ ಗಂಗಾ ಸ್ನಾನ ಮಾಡಿದ. ಅಂದರೆ ನಳದ ನೀರನ್ನು ಮಿಂಯ್ಯುವದನ್ನು ಬಿಟ್ಟು ಗಂಗಾ ನದಿಯ ಸ್ನಾನಮಾಡಿದ. ಇದರಿಂದಾವ ಪಾಪ ತಗಲೀತೆಂದು ನನಗನಿಸು ವದಿಲ್ಲ."

" ಆ ಮೇಲೆ?"

" ಮುಂದಿನ ಘಟನೆಯೂ ಸ್ವಾಭಾವಿಕವಾದುದೇ. ಅಲ್ಲಿ ಯಾವಾ ಗಲೂ ಮುದ್ರಾಧಾರಣ ಮಾಡಿಸುವವರ ಗದ್ದಲವಿದ್ದೇ ಇರುತ್ತದೆ. ಯಾರೋ ಹುಡುಗನನ್ನು ಕಂಡು ಒಂದೆರಡು ಬಿಲ್ಲಿಯ ಆಸೆಗಾಗಿ ಚಂದನ ಮುದ್ರೆ ಹೊಡೆದಿರಬೇಕು. ಅದಕ್ಕಾಗಿ ಇಷ್ಟೆಲ್ಲ ಗದ್ದಲ ಮಾಡುವುದರಲ್ಲೇನು ಅರ್ಥವಿದೆ ?"

" ಇದರ ಪರಿಣಾಮವೇನಾದೀತೆಂದು ಕಲ್ಪಿಸಿರುವಿರಾ?"

" ಪರಿಣಾಮವೇನು ಮಣ್ಣು! ಕೈಕಾಲು ತೊಳೆಯುವಾಗ ಎಲ್ಲವೂ ತೊಳೆದು ಹೋಗುತ್ತದೆ. ಇದೇ ಅದರ ಪರಿಣಾಮ. "

" ಓಹೋ, ಇಷ್ಟೇ ಏನು ? ನಿಮ್ಮ ಮಗ ಹೀಗೆ ಮಾಡಿದರೆ ಸೈರಿಸು ತ್ತಿದ್ದಿರಾ ?"

" ನನಗೆ ಮಕ್ಕಳೇ ಇಲ್ಲದಿರುವಾಗ ಇಂತಹ ನಿರರ್ಥಕ ವಾದ ಹೂಡಿ ಏನು ಪ್ರಯೋಜನ?"

" ತರ್ಕ ವ್ಯರ್ಥವಾಗಬಹುದು. ಚಂದನ ತೊಳೆದರೆ ಹೋಗಬಹುದು. ಆದರೆ ಇದರ ಪರಿಣಾಮ ಮಾತ್ರ ಅಷ್ಟು ಸುಲಭವಾಗಿ ಮರೆಯುವಂತಿಲ್ಲ. ಮಕ್ಕಳ ಭಾವೀ ಜೀವನ ಸುಗಮವಾಗುವಂತೆ ನೋಡಿಕೊಳ್ಳುವುದು ಹಿರಿಯ ರಾದ ನಮ್ಮ ಕರ್ತವ್ಯ. ನೀವು ಒಪ್ಪಿರಿ ಅಥವಾ ಒಪ್ಪದೆ ಇರಿ. ಆದರೆ ಇಂದಿನ ಘಟನೆ ಮಾತ್ರ ಅನುಚಿತವೆಂದು ಸಾರಿ ದೂರಿ ಹೇಳುತ್ತೇನೆ."

" ನೀವು ಎಂದು ಸುಮ್ಮನೆ ಏಕೆ ಹೇಳುತ್ತೀಯ? ಇಷ್ಟು ಹೊತ್ತು ನಿನ್ನೊಡನೆ ಮಾತಾಡುತ್ತಿದ್ದವ ನಾನೊಬ್ಬನೇ. ಶೈಲೇಶ ಬಂದವನೇ

ಮಗನಿಗೆ ಪೆಟ್ಟು ಕೊಟ್ಟೆ. ನಿನ್ನ ದೃಷ್ಟಿಯಿಂದ ಪಾಪಕ್ಕೆ ಪ್ರಾಯಶ್ಚಿತ್ತ ಮಾಡಿದೆ. ಇನ್ನು ಉಷಾ ಎಷ್ಟೆಂದರೂ ಬ್ರಾಹ್ಮಣರ ಸಂಸ್ಕೃತಿಯಲ್ಲಿ ಬೆಳೆದ ಹುಡುಗಿ. ಇಲ್ಲಿಗೆ ಕಾಲೂರಿದ ದಿನದಿಂದಲೇ ಮೋಡಂ ಆಗಲಾರಳಷ್ಟೇ? ಏನೇ ಇರಲಿ. ನೀವೇ ಅಣ್ಣ ತಂಗಿ ವಿಚಾರವಮಾಡಿಕೊಳ್ಳಿ. ನಾನೆದ್ದೆ.''

ಶೈಲೇಶ ಇನ್ನೂ ತನಕ ಸುಮ್ಮನಿದ್ದ. ಕ್ಷೇತ್ರಮೋಹನನು ಹೋಗಲು ಉದ್ಯುಕ್ತನಾದುದನ್ನು ನೋಡಿ ''ಎಲ್ಲಿ ಎದ್ದೆಯಪ್ಪಾ ನೀನು?'' ಎಂದ.

''ನಾನು ಮೇಲೆ ಹೋಗಿ ಗೃಹಿಣಿಯೊಡನೆ ಪರಿಚಯ ಮಾಡಿಕೊಳ್ಳ ಲಾಗುತ್ತದೆಯೋ ನೋಡುವೆ.'' ಬಾಯಿಂದ ಇನ್ನೇನೂ ಹೊರಡದ್ದರಿಂದ ಆತ ಹೋಗಿಬಿಟ್ಟ.

ಅಲ್ಲಿಂದ ನೇರವಾಗಿ ಉಷೆಯು ಕುಳಿತ ಕೋಣೆಯ ಬಾಗಿಲಲ್ಲಿ ನಿಂತು ''ಅಕ್ಕಾ, ನಮಸ್ಕಾರ'' ಎಂದನು.

ಉಷೆಯು ಮುಖ ಮೇಲೆ ಮಾಡಿ ನೋಡಿದಳು. ಹಾಗೆಯೇ ತಲೆಯ ಸೆರಗನ್ನೆಳೆದು ನಿಂತಳು. ಹತ್ತಿರ ಕುಳಿತಿದ್ದ ಸೋಮೇಂದ್ರ ''ಅಮ್ಮ, ಮಾವ ಬಂದ, ಮಾವ'' ಎಂದು ಕೈತಟ್ಟಿ ಕೂಗಿದ.

ಹತ್ತಿರದಲ್ಲಿದ್ದ ಮಣೆಯ ಮೇಲೆ ಕೂಡ್ರಲು ಸನ್ನೆಮಾಡಿದಳು. ಆಕೆಯ ಮುಂದೆ ಎರಡು ಕಪಾಟು ತೆರೆದಿದ್ದಿತು. ನೆಲದ ಮೇಲೆ ವಸ್ತ್ರ ರಾಶಿರಾಶಿ ಯಾಗಿ ಹರಡಿತ್ತು. ಅದು ಎಂದಿನಿಂದ ಅಲ್ಲಿ ಬಿದ್ದಿತ್ತೋ ಯಾರು ಬಲ್ಲರು?

ಕ್ಷೇತ್ರಮೋಹನ ಮಣೆಯ ಮೇಲೆ ಕುಳಿತು ''ನೀವೇನು ನಡೆಸಿರು ವಿರಿ?'' ಎಂದು ಕೇಳಿದ.

ಉಷೆಯು ಒಂದೊಂದಾಗಿ ವಸ್ತ್ರವನ್ನು ಜತನದಿಂದ ಇಡುತ್ತಿದ್ದಳು. ಆಕೆಯ ಓರಣವನ್ನು ಕಂಡು ಚಕಿತನಾದ.

''ಇದನ್ನೇನು ಅನಾಥಾಲಯಕ್ಕೆ ಕೊಡುವ ಸಿದ್ಧತೆ ಮಾಡುತ್ತಿರು ವಿರಾ? ಅಥವಾ ಹರಕು ಬಟ್ಟೆಗಳನ್ನೆಲ್ಲ ಸರಿಪಡಿಸುವ ಇರಾದೆಯಿಂದ ನೋಡುತ್ತಿರುವಿರಾ?''

ಆತ ಉಷೆಯು ಬಗ್ಗೆ ಏನೇನನ್ನೋ ಕಲ್ಪಿಸಿಕೊಂಡಿದ್ದ. ಆಕೆಯೆಷ್ಟಾ ದರೂ ಹಳ್ಳಿಯ ಹುಡುಗಿ. ಹೊರಗಿನವರೆದುರಿಗೆ ನಿಲ್ಲಲಾರಳು. ಆದರೆ ಉಷೆಯ ಆಚರಣೆಯಲ್ಲಿ ಅದಾವ ರೀತಿಯೂ ಕಂಡುಬರಲಿಲ್ಲ. ತಲೆಯೆತ್ತಿ

ಆತನನ್ನು ನೋಡಲಿಲ್ಲವೆಂಬುದು ನಿಜವಾದರೂ, ಆಕೆ ಸಹಜವಾಗಿಯೇ ಉತ್ತರವಿತ್ತಳು. ಮಾತಿನಲ್ಲಾವ ಸಂಕೋಚವಿರಲಿಲ್ಲ.

"ಇವನ್ನೆಲ್ಲ ಸರಿಪಡಿಸಬೇಕೆಂದಿರುವೆ. ಇನ್ನು ಹತ್ತು ವರ್ಷ ಹೊಸ ವಸ್ತ್ರ ಕೊಳ್ಳುವ ಅವಶ್ಯಕತೆಯೇ ಉಂಟಾಗಲಿಕ್ಕಿಲ್ಲ."

ಕೆಲಹೊತ್ತು ಆತನ ಬಾಯಿಂದ ಮಾತೇ ಹೊರಡಲಿಲ್ಲ. "ಅಕ್ಕ, ಇಲ್ಲಿ ಇನ್ನಾರೂ ಇಲ್ಲ. ಆದಕ್ಕಾಗಿ ಒಂದು ಮಾತು ಹೇಳಿ ಮುಗಿಸುತ್ತೇನೆ. ನನ್ನ ಹೆಂಡತಿಯು ಗುಣವನ್ನು ಕಂಡು ನಾನೂ ಅದೇ ರೀತಿಯ ಮನುಷ್ಯ ನೆಂದು ಮಾತ್ರ ಊಹಿಸಬೇಡ. ನನ್ನ ಉಡಿಗೆ ತೊಡಿಗೆ ರೀತಿನೀತಿಯನ್ನು ನೋಡಿ ನಾನು ಕ್ರಿಶ್ಚನ್ನನೆಂದು ತಿಳಿಯಬೇಡ. ಇದೆಲ್ಲ ನನ್ನ ಬಾಹ್ಯರೂಪ. ಅಂತರಂಗದಿಂದ ನಾನು ಹಿಂದುವೇ ಇದ್ದೇನೆ. ಯಾರಾದರೂ ಗಂಗಾಸ್ನಾನ ಮಾಡಿದರೆ ನಾನಂತೂ ಕೈಯೆತ್ತುತ್ತಿದ್ದಿಲ್ಲ. ಇಂದು ಶೈಲೇಶನು ಸೋಮೇಂದ್ರ ನಿಗೆ ಹೊಡೆದುದೇನೋ ನಿಜ. ಆದರೆ ನಿಜವಾಗಿಯೂ ಆತ ಅಂತಹ ಕೀಳು ತರಗತಿಯ ಮನುಷ್ಯನಲ್ಲ. ಮನಸ್ಸಿನಲ್ಲಿ ಆತನೂ ನೊಂದಿರಬೇಕು."

ಉಷೆಯು ಏನೆಂದೂ ಉತ್ತರಕೊಡಲಿಲ್ಲ. ಆಕೆ ಸುಮ್ಮನೆ ನಿಂತಿದ್ದಳು.

"ಅಕ್ಕಾ, ನೀವು ಕುಳಿತುಕೊಳ್ಳಿ. ನನ್ನ ಸಲುವಾಗಿ ನಿಮ್ಮ ವೇಳೆ ವ್ಯರ್ಥವಾಗುವದು ಬೇಡ. ನಿಮ್ಮಂತಹ ಗೃಹಲಕ್ಷ್ಮಿಯರಿಂದ ನಾನೂ ಗೃಹವ್ಯವಸ್ಥೆಯ ಪಾಠ ಕಲಿಯಬೇಕಾಗಿದೆ."

ಉಷೆಯು ನಕ್ಕು "ಇವೆಲ್ಲ ಹೆಂಗುಸರ ಕೆಲಸ. ಇದನ್ನೆಲ್ಲ ನೀವು ಕಲಿತೇನು ಫಲ?" ಎಂದಳು.

"ಇದಕ್ಕೆ ಇನ್ನೆಂದಾದರೂ ಉತ್ತರ ಕೊಡುವೆ."

ಆಕೆ ತನ್ನ ಕೆಲಸವನ್ನು ನಿರ್ವಹಿಸುತ್ತಲೇ "ಇದೆಲ್ಲ ದೀನದರಿದ್ರರ ಕೆಲಸ. ತಮ್ಮಂತಹ ಮಹನೀಯರಿಗೆ ಇದರ ಅವಶ್ಯಕತೆಯೆಂದೂ ಬೀಳದು" ಎಂದಳು.

ಕ್ಷೇತ್ರಮೋಹನ ನಿಟ್ಟುಸಿರಿಟ್ಟು, "ಅಕ್ಕಾ, ಹೊರಗಿನ ಥಾಟು ನೋಡಿ ನಿಮ್ಮಂತಹರೂ ಹೀಗೆ ಅಭಿಪ್ರಾಯಪಟ್ಟರೆ ನನ್ನಂತಹ ದುಃಖಿತರ ವ್ಯಥೆ ಯನ್ನು ಅರಿಯುವವರಾರು? ನನ್ನ ತಂಗಿಯೂ ನನ್ನ ಜೊತೆಗೆ ಬಂದಿದ್ದಾಳೆ. ಆಕೆಯನ್ನು ಕೆಲದಿವಸ ನಿಮ್ಮ ಬಳಿಯಲ್ಲಿಟ್ಟು ಹೋಗಲು ಮನಸ್ಸು

ಹಾತೊರೆಯುತ್ತಿದೆ. ನಿಮ್ಮಲ್ಲಿಯ ಕೆಲವಂಶವನ್ನಾದರೂ ಆಕೆ ಅರಿತು ಕೊಂಡರೆ ಮುಂದಿನ ಜೀವನ ಸುಗಮವಾದೀತು.''

ಅಷ್ಟರಲ್ಲಿ ಎಲ್ಲರೂ ಮಾಳಿಗೆಯೇರಿ ಬರುವ ಸದ್ದಾಯಿತು.

''ನನ್ನ ಹೆಂಡತಿ ಹಾಗೂ ನನ್ನ ತಂಗಿಯು ವೇಷಭೂಷಣಗಳ ಮೇಲಿಂದ ಇಬ್ಬರೂ ಒಂದೇ ತರಗತಿಯವರೆಂದು ಭಾವಿಸಬೇಡಿ.''

''ಕೆಲವೇ ಹೊತ್ತಿನಲ್ಲಿ ತಿಳಿಯಬಹುದೆಂದು ತೋರುತ್ತಿದೆ.''

'' ಬಹುದು–ಗಿಹುದಿನ ಶಂಕೆ ನಿಮಗೆ ಬೇಡ, ನೀವು ಅವಶ್ಯವಾಗಿ ಕಂಡುಹಿಡಿಯಬಲ್ಲಿರಿ.''

## ೮

ಮೂವರೂ ಮೇಲೆ ಬಂದರು. ಉಮೆ ಹಿಂದಿದ್ದಳು. ಆಕೆ ಕೋಣೆ ಯಲ್ಲಿ ಕಾಲಿಡುವಷ್ಟರಲ್ಲಿಯೇ ಕ್ಷೇತ್ರಮೋಹನ '' ತಂಗೀ, ಮೆಟ್ಟು ತೆಗೆದಿಟ್ಟು ಒಳಗೆ ಬಾ'' ಎಂದ.

ವಿಭಾಳಿಗೆ ಆಶ್ಚರ್ಯವಾಯಿತು. '' ಕಾಲ್ಮರೆಯನ್ನು ಹೊರಗೇಕೆ ತೆಗೆ ದಿಡಬೇಕು ?''

'' ಹೊರಗಿಟ್ಟರೆ ಹಾನಿಯೇನಿಲ್ಲ. ಒಳಗೆ ತರುವುದರಿಂದ ಲಾಭ ವಿದ್ದದ್ದೂ ಅಷ್ಟರಲ್ಲೇ ಇದೆ; ಕಾಲ್ಮರೆಯಿಲ್ಲದಿದ್ದರೆ ಇಲ್ಲಿ ಮುಳ್ಳು ನಡು ವಂತಿಲ್ಲ. ಮುಗ್ಗರಿಸಿ ಬೀಳುವ ಭಯವಿಲ್ಲ.''

'' ಅದೇನೋ ನಿಜ. ಆದರೆ ಒಮ್ಮೆಲೇ ತೆಗೆದಿಡುವ ಕಾರಣವೇನು ಬಂತು ?''

''ಅಕ್ಕ, ಹಿಂದೂ ಸಂಪ್ರದಾಯದಲ್ಲಿ ಬೆಳೆದವಳು. ಅಲ್ಲಿಯ ಆಚಾರ ವಿಚಾರಗಳೇ ಆಕೆಗೆ ಮಾನ್ಯ. ಅಲ್ಲದೆ ಅವರು ಹಿರಿಯರು ಗುರುಜನರು. ಅಂತಹರಿದ್ದಲ್ಲಿ ಕಾಲ್ಮರೆ ಹೊರಗಿಟ್ಟು ಬರುವುದೇ ವಾಸಿ ''

ಗಂಡನ ಕಾಲಿಗೂ ಕಾಲ್ಮರೆಯಿಲ್ಲದ್ದನ್ನು ಆಕೆ ಕಂಡಳು. ಉರಿಯುವ ಗಾಯಕ್ಕೆ ಉಪ್ಪೆರಚಿದಂತಾಯಿತು. '' ಗುರುಜನರಲ್ಲಿರುವ ಅಪಾರವಾದ ಭಕ್ತಿ ಯನ್ನು ನಾನೇನು ಅರಿಯೆನೇ? ಆದರೆ ಅವರ ಸೋಗು ವಿಹಿತವಲ್ಲ.

ಇದಂತೂ ಅವರ ಮಲಗುವ ಕೋಣೆಯಾಯಿತು. ಅದಕ್ಕೇ ಇಷ್ಟು—ದೇವರ ಕೋಣೆಯಾಗಿದ್ದರೆ ಪಂಚಗವ್ಯ ಕುಡಿದೇ ಬರುತ್ತಿದ್ದರೋ ಏನೋ?''

"ಅಕ್ಕನ ಹೆಸರಿನಿಂದ ನಾನು ಕುಡಿಯುವದೂ ಅಷ್ಟರಲ್ಲೇ ಇದೆ. ಇನ್ನು ದೇವರ ಮೂರ್ತಿಯೊಡನಂತೂ ನನಗಾವ ಸಂಬಂಧವೂ ಬರುವದಿಲ್ಲ. ಅಕ್ಕ, ನಾನು ಇಲ್ಲಿ ಅನೇಕ ಸಲ ಬಂದಾಗ ಜಮಖಾನು ಕಂಡಿದ್ದೆ. ಈಗ ಅದನ್ನು ಎಲ್ಲಿಟ್ಟಿರಿ?''

"ಜಮಖಾನು ಹಾಸಿದ್ದಿದ್ದರೆ ಕೋಣೆ ಸ್ವಚ್ಛ ಮಾಡಲಾಗುವದಿಲ್ಲ. ಅಲ್ಲದೆ ಹೊಲಸು ಉಳಿಯುತ್ತದೆ.''

"ವ್ಹಾ, ಜಮಖಾನು ಹಾಸಿದರೆ ಕೋಣೆ ಹೊಲಸಾಗುತ್ತದೆಯಂತೆ. ಒಳ್ಳೆಯ ವಿಚಾರ'' ಎಂದು ವಿಭೆಯು ವ್ಯಂಗ್ಯವಾಗಿ ನುಡಿದಳು.

"ಕೋಣೆ ಹೊಲಸಾಗುತ್ತದೆ. ಹೊರಗೆ ಸ್ವಚ್ಛವಾಗಿ ಕಂಡರೂ ಅದರಡಿಯಲ್ಲಿ ಧೂಳು ಮಣ್ಣು ಸೇರಿಕೊಂಡಿರುತ್ತದೆ.''

ವಿಭಾಳು ಉತ್ತರ ಕೊಡುವಷ್ಟರಲ್ಲಿಯೇ ಕ್ಷೇತ್ರಮೋಹನ "ಅಕ್ಕ, ಚನ್ನಾಗಿ ಹೇಳಿದೆ ನೋಡು. ಬುಡದಲ್ಲಿ ಹೊಲಸಿದ್ದರೇನು? ನಮ್ಮ ಕಣ್ಣಿಗೆ ಬೀಳದಿದ್ದರಾಯಿತು—ಅದೇ ಅಲ್ಲವೇ ಶೈಲೇಶ?''

ಶೈಲೇಶ ಮಾತಾಡಲಿಲ್ಲ. ವಿಭಾಳ ಸಿಟ್ಟಿಗೆ ಸೀಮೆ ಇರಲಿಲ್ಲ. ಆದರೂ ಮೌನವಾಗಿ ಉಳಿದಳು. ಗಂಡಹೆಂಡರಲ್ಲಿ ವಾದವಿವಾದವಾಗುತ್ತಿದ್ದರೂ ಪ್ರೇಮಕ್ಕೇನೂ ಕೊರತೆ ಇರಲಿಲ್ಲ. ಆದರೆ ಜನರ ಮುಂದೆ ಸೋಲನ್ನೊಪ್ಪಿ ಕೊಳ್ಳಲು ವಿಭಾಳು ಎಂದಿಗೂ ಸಿದ್ಧಳಿದ್ದಿಲ್ಲ. ಅದಕ್ಕಾಗಿ ಮಾತು ಬಂದಾಗ ಸೋತು ಹೋದವನೇ ಜಾಣನೆಂಬಂತೆ ವಾದ ಬೆಳೆಯುವ ಸಂದರ್ಭ ಕಂಡಾಗಲೆಲ್ಲ ತಾನೇ ಸೋತಂತೆ ಮಾಡುತ್ತಿದ್ದ. ಆದರೆ ಇಂದು ಒಮ್ಮಿಂದೊಮ್ಮೆಲೇ ಶಾಂತನಾಗಲು ಆತನ ಮನಸ್ಸು ಒಡಂಬಡಲಿಲ್ಲ. ವಿಭಾಳಿಗೂ ಗಂಡನ ಈ ಒಲವು ತಿಳಿಯಿತು. ಅದಕ್ಕಾಗಿ ತಾನೇ ಬಿಗಿಹಿಡಿದಳು.

ವಿಭಾಳು ಹೇಳಿದ್ದನ್ನೆಲ್ಲ ಸುಮ್ಮನೆ ಕೇಳಲು ಕ್ಷೇತ್ರಮೋಹನನಿಂದು ಸಿದ್ಧನಿದ್ದಿಲ್ಲ. ಅದಕ್ಕೆ ಕಾರಣವೂ ಇತ್ತು. ಹೆರವರ ಕ್ಷುಲ್ಲಕ ಅಪರಾಧವನ್ನೇ ದೊಡ್ಡದು ಮಾಡಿ ಅವರ ಮನನೋಯಿಸುವ ಆಕೆಯ ಸ್ವಭಾವ ಆತ ಅರಿತಿದ್ದ. ಆದರೆ ಅದರಿಂದ ಇವಳಿಗೇ ಹಾನಿಯಾಗುತ್ತಿತ್ತೇ

ಹೊರತು ಹೆರವರಿಗೆ ಬಾಧೆ ತಟ್ಟುತ್ತಿರಲಿಲ್ಲ. ಆದರೆ ಇಂದಿನ ನಡತೆಯಿಂದ ಉಷೆಗೆ ಹಾನಿಯಾಗುವಂತಿತ್ತು.

ಆ ನಿರಪರಾಧಿ ಮನೆಯಲ್ಲಿ ಕಾಲಿಟ್ಟಂದಿನಿಂದ ವಿಭಾಳು ಕೈತೊಳೆದು ಆಕೆಯ ಬೆನ್ನುಹತ್ತಿದ್ದಳು. ಉಷೆ ಒಂದು ರೀತಿಯಿಂದ ದುರ್ದೈವಿ. ಯಾರದೋ ತಪ್ಪಿಗಾಗಿ ಆಕೆ ತನ್ನ ಮನೆಗೆ ಎರವಾಗಿ ದಾರುಣ ದುಃಖ ಕ್ಕೀಡಾಗಿದ್ದಳು. ಈಗ ಯಾವ ಪುಣ್ಯದಿಂದಲೋ ತುಸು ಆಸರೆ ದೊರೆತಿದೆ ಯೆನ್ನುವಷ್ಟರಲ್ಲಿ ಈಕೆಯ ತೊಂದರೆ. ಯಾರಿಗೆ ತಾನೇ ಸಿಟ್ಟು ಬರಲಿಕ್ಕಿಲ್ಲ? ಆತನೂ ಮದುವೆಯಾದ ಮನುಷ್ಯ. ಗಂಡನ ಕರ್ತವ್ಯಕರ್ಮ ಅರಿತವ. ಶೈಲೇಶ ಉಷಾಳೊಡನೆ ಅಪರಾಧ ಮಾಡಿದ್ದಾನೆ— ಸರಿಯಾಗಿ ವ್ಯವಹರಿಸಿಲ್ಲ ವೆಂದು ಆತನಿಗೆ ಗೊತ್ತು. ಈಗಲೇನೋ ಕರ್ತವ್ಯ ಪರಾಯಣನಾಗುತ್ತಿರುವ ಸೂಚನೆ ಕಂಡುಬರುತ್ತಿರುವಾಗ ಕಲ್ಲುಹಾಕುತ್ತಿರುವುದನ್ನು ಕಂಡು ಆತನಿಂದ ಸಹಿಸಲಾಗಲಿಲ್ಲ. ಅದಕ್ಕಾಗಿ ಸಿಟ್ಟು ಬಂದಿತು ಈ ಸಿಟ್ಟಿಗೆ ಉಷಾಳ ಚರಣರಜದಲ್ಲಿದ್ದ ಯೋಗ್ಯತೆಯೂ ವಿಭಾಳಿಗೆ ಇಲ್ಲವೆಂಬ ಅಂತರಂಗದ ಇನ್ನೊಂದು ಕಾರಣವೂ ಕಾರಣವಾಗಿರಬಹುದು.

ಅಂತೂ ವಿಭಾಳನ್ನು ಈಗ ಕ್ಷಮಿಸುವದು ಉಚಿತವಲ್ಲವೆಂದು ಕಂಡು ಬಂದರೂ, ಎಲ್ಲರ ಮಧ್ಯದಲ್ಲಿ ಒಮ್ಮೆಲೇ ಅವಮಾನಿಸುವುದು ಯೋಗ್ಯವಲ್ಲ ವೆಂದು ಸುಮ್ಮನಾಗಲು ಯತ್ನಿಸಿದ. ಅಲ್ಲದೆ ತನ್ನ ಈ ಮನೋಭಾವನೆ ಯನ್ನು ತೋರ್ಪಡಿಸುವ ಮನಸ್ಸೂ ಆತನಿಗಿರಲಿಲ್ಲ. ಅದಕ್ಕಾಗಿ ತಂಗಿ ಯನ್ನು ಕುರಿತು " ಉಮಾ, ಈ ಗ್ರಾಮೀಣ ಅತ್ತೆಯ ಜೊತೆಗೆ ಸಾಯಂಕಾಲ ಒಂದೆರಡು ತಾಸು ಕಳೆದರೆ ಎಷ್ಟೋ ಒಳಿತಾದೀತು. ಎಂತಹ ಪರಿಸ್ಥಿತಿ ಯಲ್ಲಿಯೂ ಮುಂದುವರಿಯಬಹುದು " ಎಂದನು.

ಉಮೆಯು ನಸುನಕ್ಕು ಸುಮ್ಮನುಳಿದಳು. ಉಷೆಯೋ " ಆಯಿತು. ಆಗಂತೂ ಕೇಳುವುದೇ ಬೇಡ. ಆಕೆ ನನ್ನ ಜೊತೆಗೆ ಬಂದು ಕೂಡಹತ್ತಿದ ಳೆಂದರೆ ನಿಮ್ಮಂತಹ ಸುಧಾರಿಸಿದ ಸಮಾಜದಲ್ಲಿ ಆಕೆಗೆ ಕೂಡಲಿಕ್ಕೂ ಸ್ಥಳ ದೊರೆಯದು. ಹೊರಗೇ ಬೀಳಬೇಕಾದೀತು " ಎಂದಳು.

" ಅಕ್ಕ, ಹೊರಬಿದ್ದರಾದರೂ ಹಾನಿಯೇನು ? ಕೊನೆಯ ಪಕ್ಷ ಅವಳ ಹಾಗೂ ಗಂಡನ ಜೀವನವಾದರೂ ಸುಖಮಯವಾಗಿ ಸಾಗುವದು

ಹೆಚ್ಚೇನು? ಈಗ ನೀವು ಮಾಡುತ್ತಿರುವ ಕೆಲಸವನ್ನಷ್ಟೇ ಮನನಮಾಡಿದರೂ ದಿನ ದಿನಾ ಹೊಸ ಹೊಸ ವಸ್ತ್ರ ಬೇಕೆಂದು ಗಂಡನನ್ನು ಕಾಡುವುದಾದರೂ ಉಳಿದೀತು. ಕುಶಲನಾದ ನಾವಿಕನು ನೀರನ್ನು ನೋಡಿದೊಡನೆಯೇ ಅದರ ಆಳವನ್ನು ಅಳೆಯುವಂತೆ, ನೀವು ಇಲ್ಲಿಯ ಸ್ಥಿತಿಯನ್ನು ಅಳೆದುಬಿಟ್ಟಿರುವಿರಿ– ತುಸು ಅಜಾಗರೂಕತೆಯಿಂದ ವರ್ತಿಸಿದರೂ ಹಡಗು ಮುಳುಗೀತೆಂದು ನೀವು ಕಂಡುಕೊಂಡಿರಿ. ಅದಕ್ಕಾಗಿ ನಿಮಗೆ ನಾನು ನನ್ನ ಪತಿಯಿಂದಲೂ, ಶೈಲೇಶನ ಪತಿಯಿಂದಲೂ ಧನ್ಯವಾದಗಳನ್ನರ್ಪಿಸಲು ಬಯಸುತ್ತೇನೆ.''

ಉಷೆಗೆ ನಾಚಿಕೆಯೆನಿಸಿತು. ''ನಮ್ಮ ಮನೆಯ ಸ್ಥಿತಿಯನ್ನು ನಾನು ಅರಿತುಕೊಳ್ಳಲು ಬಯಸಿದ್ದಕ್ಕೆ ಧನ್ಯವಾದವನ್ನೇಕೆ ಅರ್ಪಿಸುವಿರಿ?''

ಇಷ್ಟೊತ್ತು ವಿಭಾ ಹೇಗೋ ಸುಮ್ಮನಿದ್ದಳು. ಈಗ ತಡೆಯಲಾಗಲಿಲ್ಲ.

''ತಮ್ಮ ಹೆಂಡಂದಿರನ್ನು ಅಪಮಾನ ಮಾಡುವ ಉದ್ದೇಶದಿಂದಲೇ ಈ ಮಾತು ಆಡಿದ್ದು. ಅಲ್ಲದೆ ಹೆರರ ಗದ್ದೆಯಲ್ಲಿ ಬಿದ್ದ ಕಾಳನ್ನಾರಿಸುವವರನ್ನು ಹೊಗಳುವ ಈ ಪರಿಗೆ ಏನೆನ್ನಬೇಕೋ ತಿಳಿಯದು.''

''ವಿಭಾ ರಾಣಿಯವರೇ, ಮನೆಯನ್ನು ಸುಸ್ಥಿತಿಗೆ ತರಲು ಯತ್ನಿಸಿದರೆ ಭಿಕ್ಷುಕರಾಗುತ್ತಾರೆಯೋ?''

''ಇಂತಹ ಮಾತು ಸಭ್ಯರ ಬಾಯಿಂದೆಂದೂ ಹೊರಡದು. ಗಂಡ ಹೆಂಡರಲ್ಲಿ ವೈಮನಸ್ಸು ಹುಟ್ಟಿಸುವ ಈ ಪ್ರಯತ್ನಕ್ಕೆ ಏನು ಹೆಸರೋ ಯಾರು ಬಲ್ಲರು?''

ವಿಭಾಳ ಮುಖದಿಂದ ಉತ್ತರವೇ ಹೊರಡಲಿಲ್ಲ. ಏನೂ ಸೂಚಿಸದ್ದರಿಂದ ಗಂಡನ ಕಡೆಗೊಮ್ಮೆ ನೋಡಿದಳು. ಇಷ್ಟೆಲ್ಲ ಜನರೆದುರಿಗೆ ತನ್ನ ಗಂಡ ಹೀಗೆ ಹೇಳಬಹುದೆಂದು ಆಕೆ ಎಣಿಸಿರಲಿಲ್ಲ. ಆ ಮೇಲೆ ಗೋಳೆಂದು ಅಳಹತ್ತಿದಳು. ''ಅಣ್ಣಾ, ಇನ್ನು ಮುಂದೆಂದೂ ನಿಮ್ಮ ಮನೆಯ ಹತ್ತರ ಹಾಯುವದಿಲ್ಲ'' ಎಂದಳು.

ಶೈಲೇಶ ವ್ಯಾಕುಲಗೊಂಡ. ಉಷೆಯೂ ಹಿಡಿದ ಕೆಲಸಬಿಟ್ಟು ಕಾತರಳಾಗಿ ನಿಂತಳು. ಆ ಮೇಲೆ ವಿಭಾಳ ಕೈಹಿಡಿದು ''ಅತ್ತಿಗೇ ನಾವಾರೂ ನಿನಗೆ ಹಾಗೆ ಹೇಳಲಿಲ್ಲ'' ಎಂದಳು.

ಇಷ್ಟರಲ್ಲಿ ಅಪ್ರಿಯವಾದ ಘಟನೆಯೊಂದು ನಡೆಯಿತು. ಹೀಗೆ ಮಾತಾಗುತ್ತಿರುವಾಗಲೇ ಕ್ಷೇತ್ರಮೋಹನ ಅಲ್ಲಿಂದ ಜಾರಿದ. ಈಗ ವಿಭಾಳನ್ನು ತಡೆಯುವವರು ಇನ್ನಾರೂ ಉಳಿಯಲಿಲ್ಲ.

"ನಿನ್ನ ಮೇಲೆ ನಾನು ಹಗೆ ಕಟ್ಟುತ್ತಿರುವಾಗ ನಾಸಿಲ್ಲಿ ಬರುವುದು ಸರ್ವಥಾ ಯೋಗ್ಯವಲ್ಲ."

"ಅತ್ತಿಗೇ, ಕನಸಿನಲ್ಲಿಯೂ ನಾನು ಈ ರೀತಿ ಯೋಚಿಸಿರಲಿಲ್ಲ."

ಬೇರೆಯವರ ಮಾತನ್ನು ಕಿವಿಗೆ ಹಾಕಿಕೊಳ್ಳುವಷ್ಟು ತಾಳ್ಮೆ ಆಕೆಗಿರಲಿಲ್ಲ. "ಇಂದು ಅವರು ಹೇಳಿದರು. ನಾಳೆ ಅಣ್ಣನೇ ಹೇಳಬಹುದು. ಅದಕ್ಕಾಗಿ ಇಲ್ಲಿ ಮಾತಾಡುವದೆಂದರೆ ಅಪಮಾನವನ್ನು ಉಡಿಯಲ್ಲಿ ಹಾಕಿಕೊಂಡಂತೆ. ಉಮಾ, ಏಳು ಮನೆಗೆ ಹೋಗುವಾ, ನಡೆ. ಯಜಮಾನಿನಿ ಕರೆಯಿಸದೇ ಇಲ್ಲಿ ಕಾಲು ಹಾಕಿದುದೇ ನನ್ನ ತಪ್ಪು. ತಾಯಿಯ ಮನೆಯೆಂದಿದ್ದ ಅಲ್ಪಸ್ವಲ್ಪ ನಂಟುತನವೂ ಇಂದಿನಿಂದ ದೂರಾಯಿತು."

ಎಂದವಳೇ ಮಾಳಿಗೆ ಕೆಳಗಿಳಿದು ಬಂದಳು ಶೈಲೇಶನೂ ಹಿಂಬಾಲಿಸಿದ. ಆದರೆ ಆತನಿಗೆ ತುಂಬಾ ಸಂಕೋಚವಾಗಿತ್ತು. "ವಿಭಾ, ತುಸು ತಡೆ. ನನ್ನ ಲ್ಯಾಬ್ರರಿಯ ಕೋಣೆಯಲ್ಲಿ ಕುಳಿತುಕೋ."

"ಉಹುಂ. ನಾನೀಗ ಕೂಡಲಾರೆ. ಅಣ್ಣಾ, ನಿನ್ನ ಹಿರೇ ಹೆಂಡತಿಯನ್ನು ಮಾತ್ರ ಮರೆಯಬೇಡ. ಸೋಮೇಂದ್ರ ವಿಲಾಯತಿಗೆ ಹೋಗಿ ಬರಬೇಕೆಂದು ಆಕೆಯ ಆಸೆಯಿತ್ತು. ಅಣ್ಣಾ, ನಿನ್ನ ಕಾಲಿಗೆ ಬೀಳುತ್ತೇನೆ. ಆತನ ಜೀವನ ಹಾಳುಮಾಡಬೇಡ. ಇಂದು ನೋಡಿದಂತಹ ಶಿಕ್ಷಣವೇ ದೊರೆಯಹತ್ತಿತೆಂದರೆ ನನಗೆಲ್ಲಿಯೂ ಮೋರೆ ತೋರಿಸಲು ಇಂಬಿಲ್ಲದೇ ಹೋದೀತು."

ಹೆಣ್ಣಿನ ಕಂಬನಿಗೆ ಕರಗದ ಮಾನವನಾರು? ಅದರಲ್ಲಿಯೂ ಒಡಹುಟ್ಟಿದ ತಂಗಿ. "ತಂಗೀ, ನೀನು ಈ ರೀತಿ ಹೊರಟು ಹೋದರೆ ನನಗೆಷ್ಟು ವ್ಯಥೆಯಾದೀತೆಂದಾದರೂ ಊಹಿಸಿರುವೆಯಾ? ತುಸು ತಡೆ."

ವಿಭಾಳಿಗೆ ಇನ್ನೊಮ್ಮೆ ದುಃಖ ಒತ್ತರಿಸಿ ಬಂದಿತು. ಸೋಮೇಂದ್ರನ ಭವಿಷ್ಯ ಚಿಂತನೆಯಿಂದಲೋ ಅಥವಾ ಇನ್ನಾವ ಕಾರಣದಿಂದಲೋ ಯಾರು

ಬಲ್ಲ? ಆಕೆ ಕಣ್ಣೊರೆಸಿ "ಅಣ್ಣಾ, ನನಗಿನ್ನಾವ ಕೋಣೆಯಲ್ಲಿಯೂ ಕೂಡುವ ಬಯಕೆಯಿಲ್ಲ. ಆದರೆ ನಮ್ಮ ತಂದೆಯ ವಂಶಾಧಾರನೆಂದರೆ ಸೋಮೇಂದ್ರನೊಬ್ಬನೇ ಒಬ್ಬ. ಅವನನ್ನೊಂದು ಚನ್ನಾಗಿ ನೋಡಿಕೋ." ಎಂದು ತನ್ನ ಮೋಟರು ಏರಿದಳು. ಉಷೆಯೂ ಸುಮ್ಮನೆ ಅವಳ ಬಳಿಯಲ್ಲಿ ಹೋಗಿ ಕುಳಿತಳು.

"ವಿಭಾ, ಸೋಮೇಂದ್ರನನ್ನು ನಿನ್ನೊಡನೆಯೇ ಕರೆದುಕೊಂಡು ಹೋಗು. ನಿನಗೂ ಮಕ್ಕಳಿಲ್ಲ. ಇವನೇ ಮಗನೆಂದು ತಿಳಿದು ಒಬ್ಬ ಮನುಷ್ಯನನ್ನಾಗಿ ಮಾಡು" ಎಂದು ಶೈಲೇಶನೇ ವಿನಂತಿಸಿದ.

"ಅಣ್ಣ, ಇಂತಹ ಆಗದಹೋಗದ ಮಾತುಗಳನ್ನೇಕೆ ಆಡುವಿ? ಹಾಗೆ ಮಾಡಲು ನಿನಗೆ ಸಾಧ್ಯವೂ ಇಲ್ಲ."

"ಸಾಧ್ಯವೇಕಿರಲಾರದು. ತಂಗೀ, ನಿನಗೆ ಇದನ್ನು ಸತ್ಯವೆಂದು ಮಾಡಿಯೇ ತೋರಿಸುವೆ."

"ಹಾಗೆ ಮಾಡಿದರಂತೂ ಒಳಿತೇ ಆಯಿತು. ಆತನ ಉಚ್ಚ ಶಿಕ್ಷಣದ ಬಗ್ಗೆ ಖರ್ಚು ಮಾಡಲು ನಿನ್ನಲ್ಲಿ ಹಣವಿಲ್ಲದಿದ್ದರೆ ನಾನೇ ಆ ಭಾರವನ್ನು ಹೊರುವೆ."

ಆಕೆಯ ದೃಷ್ಟಿ ಹೊರಕ್ಕೆ ಹೊರಳಿದಾಗ ತನ್ನನ್ನೇ ನೋಡುತ್ತ ಹೊಸ್ತಿಲಲ್ಲಿ ನಿಂತ ಉಷೆಯು ಕಣ್ಣಿಗೆ ಬಿದ್ದಳು. ಕೆಲ ನಿಮಿಷದಲ್ಲಿಯೇ ಮೋಟರು ಹೊರಟಿತು ಆ ಮೇಲೆ ಶೈಲೇಶ ತನ್ನ ಓದುವ ಕೋಣೆಯಲ್ಲಿ ಹೋಗಿ ಕುಳಿತ. ಮೇಲೆ ಹೋಗುವ ಇಚ್ಛೆಯಾಗಲೀ ಸಾಹಸವಾಗಲೀ ಇರಲಿಲ್ಲ. ತಮ್ಮ ಮಾತನ್ನೆಲ್ಲ ಉಷೆಯು ಕೇಳಿರುವಳೆಂದು ಆತನಿಗೆ ಖಾತ್ರಿಯಾಗಿತ್ತು.

## ೬

ಉಷೆಯು, ರಾತ್ರಿ ಊಟಕ್ಕೆ ಬರಲು ಗಂಡನಿಗೆ ಹೇಳಿಕಳಿಸಿದಳು. ದಿನಾಲು ಕೂಡುವ ಸ್ಥಳದಲ್ಲಿಯೇ ಕೂತಿದ್ದಳು. ಆದರೆ ಸೋಮೇಂದ್ರನು ಮಾತ್ರ ಹತ್ತಿರಿರಲಿಲ್ಲ ಆತ ಮಲಗಿರಬೇಕು. ಶೈಲೇಶ ಬಂದ. ಆತನ

ಮೋರೆ ಗಂಭೀರವಾಗಿತ್ತು. ಬೇಕೆಂತ ಮಾತು ಬೆಳೆಸುವುದು ಉಷೆಗೆ ಒಗ್ಗದು. ಆದಕ್ಕಾಗಿ ಇಂದಿನ ಘಟನೆಯ ಪ್ರಸ್ತಾಪವನ್ನು ತಾನಾಗಿ ಎತ್ತಲಿಲ್ಲ. ತನಗೆ ಗೊತ್ತಿಲ್ಲದೆ ನಡೆದಿರಬಹುದಾದ ಘಟನೆಗಳನ್ನು ತಿಳಿದುಕೊಳ್ಳಲಿಕ್ಕೂ ಕುತೂಹಲ ತೋರಿಸಲಿಲ್ಲ. ಆಕೆಯ ಈ ಸ್ವಭಾವ ಶೈಲೇಶನಿಗೆ ಅಪರಿಚಿತವಾದುದೇನೂ ಅಲ್ಲ.

ಶೈಲೇಶ ಊಟಕ್ಕೆ ಕುಳಿತಾಗ ಮನದಲ್ಲಿಯೇ ಮುನಿದ ಆಕೆಯ ಮನೋಭಾವವನ್ನು ಕದ್ದು ನೋಡಲು ಹವಣಿಸಿದ. ಎಂದಿನಂತೆ ಆಕೆ ಕುಳಿತಿದ್ದಳಾದರೂ, ಬೇಕೆಂತಲೇ ದೀಪದ ಬದಿಗೆ ಮೋರೆಮಾಡಿ ಕುಳಿತಿರುವಳೆಂದು ಕಲ್ಪಿಸಿದ. ದಿನದಂತೆ ಸಹಜವಾಗಿ ಊಟಮಾಡಲು ಆತನಿಂದಾಗಲಿಲ್ಲ. ಉಷೆಯು “ಇಂದೇಕೆ ಊಟ ಸೇರದು?” ಎಂದು ಕೇಳಿದಾಗ “ತಿಂದದ್ದೇ ತಿಂದರೆ ಒಮ್ಮೊಮ್ಮೆ ಬೇಸರ ಬರುತ್ತದೆ” ಯೆಂದು ಹಾರಿಸಿನುಡಿದ. ಆದರೆ ಕಾರಣ ಬೇರೆಯೇ ಇತ್ತು. ಇದು ನಿಜವಾದ ಕಾರಣವಲ್ಲವೆಂದು ಉಷೆಗೆ ಅನಿಸಿದರೂ ಆಕೆ ತರ್ಕಮಾಡಲು ಸಿದ್ಧಳಾಗಲಿಲ್ಲ.

ಪ್ರತ್ಯುತ್ತರ ಕೊಡದೆ ಸೋಲನ್ನೊಪ್ಪಿಕೊಂಡಲ್ಲಿ ವಿರೋಧಿ ಪಕ್ಷದವರ ಗಂಟಲು ದೊಡ್ಡದಾಗುವದು ಸ್ವಾಭಾವಿಕ. ಅದರಂತೆ ಊಟಮಾಡಿ ಶೈಲೇಶ ಹೊರಗೆ ಬಂದಾಗ “ನಾವೆಲ್ಲರೂ ಒಮ್ಮೆ ನಿನ್ನೊಡನೆ ಅನ್ಯಾಯವಾಗಿ ವರ್ತಿಸಿದ್ದೇವೆಂಬುದು ನಿಜ. ಆದಕ್ಕಾಗಿ ಸರ್ವಾಧಿಕಾರವನ್ನೂ ನಿನಗೇ ಒಪ್ಪಿಸಿದ್ದಾರೆಂದು ತಿಳಿಯುವುದು ಬೇಡ” ಎಂದನು.

ಮೊದಲನೇ ದಿನ ಕಾಲೂರಿದಾಗಲೂ ಆಕೆ ಇಂತಹ ಕಟು ಮಾತನ್ನು ಕೇಳಿರಲಿಲ್ಲ. ಆದಕ್ಕಾಗಿ ಆಕೆಗೆ ಆಶ್ಚರ್ಯವಾಯಿತು. “ನನಗೇನೂ ಗೊತ್ತಾಗಲಿಲ್ಲ” ಎಂದಳು.

ಆಕೆ ವಿನಯದಿಂದ ಹೇಳಿದ್ದಳಾದರೂ ಆತನ ಸಿಟ್ಟು ಕಡಿಮೆಯಾಗಲಿಲ್ಲ.

“ಈ ಮಾತು ನಿನಗೆ ತಿಳಿದಿರಬೇಕಿತ್ತು. ನಮ್ಮ ಶಿಕ್ಷಣ, ಸಮಾಜ, ಸಂಸ್ಕಾರಗಳನ್ನೆಲ್ಲ ಪರಿತ್ಯಜಿಸಿ ನಿಮ್ಮ ತಂದೆಯ ಮನೆಯಂತೆ ಪುರೋಹಿತರ ಮನೆಯನ್ನಾಗಿ ಮಾರ್ಪಡಿಸಿದರೆ ನಮಗೆ ಸಮಾಜದಲ್ಲಿ ತಲೆಯೆತ್ತಿ ತಿರುಗಲು ಅಸಾಧ್ಯವಾದೀತು. ನಾನು ಸೋಮೇಂದ್ರನನ್ನು ಆತನ ಅತ್ತೆಯ ಮನೆಗೆ ಕಳಿಸಬೇಕೆಂದು ಮಾಡಿರುವೆ. ನಿನ್ನ ಅಭಿಪ್ರಾಯವೇನು?”

" ಎಲ್ಲಿಯಾದರೂ ಅವನ ಹಿತವಾದರೆ ಸಾಕು. "

ಆಕೆಯು ಸಹಜವಾಗಿಯೇ ಮೇಲಿನ ಮಾತು ಹೇಳಿದಳು. ಅದರಲ್ಲಾವ ವ್ಯಂಗ್ಯವೂ ಇರಲಿಲ್ಲ. ಅದರಿಂದ ಆತನ ಸಂಕಲ್ಪದಲ್ಲಿ ತುಸು ವಿಕಲ್ಪವುಂಟಾಯಿತು. ಸೋಮೇಂದ್ರನ ಹಿತ ಯಾವ ರೀತಿಯಿಂದ ಸಾಧಿಸೀತೆಂಬ ಬಗ್ಗೆ ನಿಶ್ಚಿತವಾದ ಯೋಜನೆ ಆತನ ಮುಂದಿರಲಿಲ್ಲ. ದುರ್ಬಲ ಪ್ರಕೃತಿಯ ಮನುಷ್ಯರ ಅವಸ್ಥೆಯೇ ಹೀಗೆ. ಕಾಲ್ಪನಿಕ ಮನೋವ್ಯಥೆ ಇಲ್ಲವೆ ಅಸಂಗತ ಅಭಿಮಾನದ ಮೂಲಕ ಒಮ್ಮೆಲೇ ರೇಗಿಗೇಳುವರು. ಸಾವಕಾಶವಾಗಿ ಬುದ್ಧಿಯು ಸ್ತಿಮಿತಕ್ಕೆ ಬರಹತ್ತಿದಂತೆ ಪಶ್ಚಾತ್ತಾಪ ಪಡುತ್ತಾರೆ.

ಶೈಲೇಶ ಕೆಲಹೊತ್ತಿನಮೇಲೆ " ಆತ ಅಲ್ಲಿಯೇ ಇರುವುದು ಒಳಿತೆಂದು ಜನರ ಅಭಿಪ್ರಾಯವಿದೆ. ನಮ್ಮನಿಮ್ಮ ರೀತಿನೀತಿಗಳಲ್ಲಿ ಅಜಗಜಾಂತರವಿದೆ. ಆದಕ್ಕಾಗಿ ಅಣ್ಣತಂಗಿಯರಲ್ಲಿ ಜಗಳಕ್ಕೆ ಕಾರಣವಾಗಿ ಜನತೆಯಲ್ಲಿ ಹಾಸ್ಯಕ್ಕೆಡೆಗೊಟ್ಟಿದೆ. ಅದು ನನಗೆ ಸೇರದು " ಎಂದ.

ಇದಕ್ಕೆ ಪ್ರತಿಹೇಳಲು ಉಷೆಗೆ ಸರಿಯೆನಿಸಲಿಲ್ಲ. ತನ್ನದೇ ಸರಿಯೆಂದು ವಾದಿಸಲು ಹೋಗಲಿಲ್ಲ. ಆದರೆ ಆಕೆಯ ಮುಖದಿಂದ ನಿಟ್ಟುಸಿರೊಂದು ಹೊರಬಿತ್ತು. ಕೋಣೆಯಲ್ಲಿ ಸ್ತಬ್ಧತೆಯಿದ್ದುದರಿಂದ ಶೈಲೇಶನಿಗೂ ಕೇಳಿಸಿತು. ವಿಭಾಳೊಡನೆ ನಡೆದ ವಾದವಿವಾದದಲ್ಲಿ ಆಕೆಯ ಅಂಗವಿರಲಿಲ್ಲ. ಆಕೆ ಯಾವ ಮಾತೂ ಆಡಿರಲಿಲ್ಲ

ಶೈಲೇಶನೇ ತನ್ನ ಮಾತು ಮುಂದರಿಸಿದ. " ವಿಲಾಯತಿಯಲ್ಲಿದ್ದು ಕಲಿತುಬರಬೇಕಾದವನು ಅಲ್ಲಿಯ ಶಿಷ್ಟಾಚಾರವನ್ನೆಲ್ಲ ಇಲ್ಲಿಯೇ ಕಲಿತುಕೊಳ್ಳಬೇಕಾಗುತ್ತದೆ. ಅಂತಹ ವಾತಾವರಣದಲ್ಲಿಯೇ ಆತ ಬೆಳೆಯಬೇಕಾಗುತ್ತದೆ. ಮುಂದಿನ ಜೀವನಕ್ಕೆ ಸಹಕಾರಿಯಾಗುವ ಶಿಕ್ಷಣ ಕೊಡಿಸದಿದ್ದರೆ ನಾವು ದೊಡ್ಡ ಅನ್ಯಾಯಮಾಡಿದಂತಾದೀತು. ಅವರು ಚೆನ್ನಾಗಿ ಬೆಳೆಯುವಂತೆ ಮಾಡುವುದೇ ತಂದೆ ತಾಯಿಗಳ ಕರ್ತವ್ಯ. "

ಇಷ್ಟು ಹೇಳಿ ಕ್ಷಣಕಾಲ ತಡೆದ. ಆದರೂ ಉಷೆಯು ಮಾತಾಡಲಿಲ್ಲ. ಹೀಗಾಗಿ ಶೈಲೇಶನೇ ಮುಂದುವರಿಸಿದ. " ಈ ವಿಷಯದಲ್ಲಿ ನೀನೇನೂ ಹೇಳುವುದಿಲ್ಲವಾದರೆ ಸರಿ. ಆದರೆ ಬರೆ ನಿಟ್ಟುಸಿರಿಟ್ಟು ಕುಳಿತರೆ ನಿನ್ನ

ಅಭಿಪ್ರಾಯ ಹೇಗೆ ಗೊತ್ತಾಗಬೇಕು? ಸೋಮೇಂದ್ರನ ಬಗ್ಗೆ ನಾವು ತುಂಬಾ ಯೋಚಿಸಿಯೇ ಈ ನಿರ್ಣಯಕ್ಕೆ ಬಂದಿದ್ದೇವೆ."

ಸೋಮೇಂದ್ರ ಹತ್ತಿರವೇ ಮಲಗಿದ್ದ. ಮನೆಯಲ್ಲಿ ಇನ್ನಾವ ಹೆಂಗಸೂ ಇರದ್ದರಿಂದ ತನ್ನ ಜೊತೆಗೇ ಮಲಗಿಸಿಕೊಳ್ಳುತ್ತಿದ್ದಳು. ಉಷೆಯು ವಾತ್ಸಲ್ಯದಿಂದ ಮಗುವಿನ ತಲೆಯಮೇಲೆ ಕೈಯಾಡಿಸಿ "ಅವನ ಹಿತದಲ್ಲಿ ನಾನೇಕೆ ಅಡ್ಡ ಬರಲಿ?" ಎಂದಳು.

"ಅಷ್ಟೇ ಅಲ್ಲ; ವಿಭೆಯು ಸೋಮೆಂದ್ರನ ಶಿಕ್ಷಣದ ಯಾವತ್ತೂ ಭಾರವನ್ನು ಹೊರಲು ಸಿದ್ಧಳಾಗಿದ್ದಾಳೆ. ಇದೇನು ಸಣ್ಣ ಮಾತಲ್ಲ."

ಉಷೆಗೆ ಸಿಟ್ಟಿಗೇಳುವದೆಂದರೇ ಗೊತ್ತಿರಲಿಲ್ಲ. ಗದರುವದೂ ಸೇರುತ್ತಿರಲಿಲ್ಲ. ಯಾವಾಗಲೂ ಶಾಂತ ಸ್ವಭಾವದವಳು ಆಕೆ. "ಯಾರೊಬ್ಬರ ದಯೆಯಿಂದ ನಮ್ಮ ಹುಡುಗ ಕಲಿಯಬೇಕಾಗಿಲ್ಲ. ಅವರ ಖರ್ಚಿನಿಂದ ಕಲಿಯುವದಾದರೆ ನಾನು ಹುಡುಗನನ್ನು ಕಳುಹಿಸುವುದೇ ಇಲ್ಲ" ಎಂದಳು.

"ವಿಲಾಯತಿಗೆ ಕಳಿಸುವದಾದರೆ ಬಹಳ ಹಣ ಬೇಕಲ್ಲ! ಏನು ಮಾಡುವದು?"

"ಅವಶ್ಯ ಬಿದ್ದಾಗ ನೋಡಿದರಾಯಿತು. ಈಗ ರಾತ್ರಿಯಾಯಿತು ಮಲಗಿರಿ."

ಮಾರನೇ ದಿನ ಕಾಲೇಜು, ಕ್ಲಬ್ಬು ಮುಗಿಸಿ ಮನೆಗೆ ಮರಳುತ್ತಿರುವಾಗ ಅಡಿಗೆಯ ಮನೆಯಿಂದ ಹೊರಡುತ್ತಿದ್ದ ಸುವಾಸನೆಯಿಂದ ಬಾಯಲ್ಲಿ ನೀರೂರಿತು. ಆತ ಮನದಲ್ಲಿಯೇ ಚಕಿತನಾಗಿ, ತನ್ನ ಓದುವ ಕೋಣೆಗೆ ಹೋದ. ತುಸುಹೊತ್ತಿನಲ್ಲಿಯೇ ಒಬ್ಬ ಮುಸಲ್ಮಾನನು ಬಂದು ಫಲಾಹಾರಕ್ಕೆ ಅಣಿಮಾಡಿಟ್ಟುಹೋದನು.

ರಾತ್ರಿ ಊಟಕ್ಕೆ ಹೋದಾಗ ನಿನ್ನಿನಂತಿರಲಿಲ್ಲ. ಮೇಜಿನ ಮೇಲೆ ಎಲ್ಲವನ್ನೂ ಸಿದ್ಧಪಡಿಸಿದ್ದರು. ಆತನಿಗೂ ಇದೇ ರೀತಿಯ ಭೋಜನ ಬೇಕಾಗಿತ್ತು. ಕೆಲಹೊತ್ತಿನಲ್ಲಿ ಉಷೆಯು ಬಂದು ಬಳಿಯಲ್ಲಿದ್ದ ಖುರ್ಚಿಯನ್ನೆಳೆದುಕೊಂಡು ಕುಳಿತಳು.

ಶೈಲೇಶ ಆಗ ಪ್ರಸನ್ನನಾಗಿದ್ದ. "ಇಲ್ಲಿ ಬಂದರೆ ನಿನ್ನ ಜಾತಿಯೇನೂ ಹೋಗಲಾರದು. ವಾಸನೆ ತೆಗೆದುಕೊಂಡರೂ ಅರ್ಧ ಊಟವಮಾಡಿದಂತೆ ಎಂದು ಶಾಸ್ತ್ರಕಾರರ ಅಭಿಪ್ರಾಯವಿದೆ."

"ನಿಮಗೆ ಶಾಸ್ತ್ರಾಧಾರ ಹೇಳುವ ಹಕ್ಕಿಲ್ಲ. ಯಾಕಂದರೆ ನೀವೆಲ್ಲಿ ಶಾಸ್ತ್ರವನ್ನು ಒಪ್ಪುತ್ತೀರಿ?"

"ಆಗಲಿ, ನಾನೇ ಸೋತೆ. ನಿನ್ನೆ ನಿನಗೆ ತುಸು ಗದರಿಸಿದ್ದಕ್ಕಾಗಿ ನನಗಿಂದು ಇಂತಹ ಊಟ ಸಿಕ್ಕಿತು. ಅಲ್ಲವೇ ಉಷಾ? ಆದರೆ ಇದರಿಂದ ವೆಚ್ಚ ಹೆಚ್ಚಲಿಕ್ಕಿಲ್ಲವಷ್ಟೇ?"

"ಇಲ್ಲ. ಸಿಕ್ಕಸಿಕ್ಕಂತೆ ಅಪವ್ಯಯಮಾಡದಿದ್ದರೆ ತಿನ್ನುಣ್ಣುವುದಕ್ಕೆ ವಿಶೇಷ ಖರ್ಚು ಬಾರದು. ಈ ರೀತಿ ಊಟದ ಯೋಜನೆ ಮುಂದಿನ ತಿಂಗಳಿನಿಂದ ನಾನೇ ಮಾಡಬೇಕೆಂದಿದ್ದೆ. ಮನೆಯ ಖರ್ಚಿಗಾಗಿ ನಾನೊಂದು ನಿಯಮ ಮಾಡಿರುವೆ. ಅದರಂತೆ ನಡೆದರೆ ವಿಶೇಷ ವೆಚ್ಚ ತಗಲದು. ಹಾಗೆಯೇ ನಡೆಯುವಿರಷ್ಟೇ?"

"ಹಾಗೆ ನಡೆಯದೆ ಏನು?" ಎಂದು ಶೈಲೇಶ ಚಕಿತನಾಗಿ ಕೇಳಿದ.

ಉಷೆಗೆ ಏನೆಂದು ಉತ್ತರಕೊಡಬೇಕೆಂದು ಒಮ್ಮೆಲೇ ತೋರದ್ದರಿಂದ ಕೆಲಹೊತ್ತಿನ ಮೇಲೆ "ರಾತ್ರಿಯೆಲ್ಲ ಯೋಚಿಸಿ ನಾನೊಂದು ನಿರ್ಧಾರಕ್ಕೆ ಬಂದಿರುವೆ. ಹಾಗೆ ನಡೆಯಲು ಅನುಮತಿ ಕೊಡಬೇಕಾಗಿ ನನ್ನ ಬೇಡಿಕೆ ಇದೆ."

"ಉಷಾ, ನಾನೆಂದೂ ನಿನ್ನ ಇಚ್ಛೆಗೆ ವಿರೋಧವಾಗಿ ನಡೆದವನಲ್ಲ. ನಿನ್ನ ತೀರ್ಮಾನಗಳು ನಿನಗನುಗುಣವಾಗಿ ಯೋಗ್ಯವೇ ಇರುತ್ತವೆ. ಅದರಲ್ಲಿ ಬಹಳಷ್ಟು ತಿದ್ದುಪಾಟು ಮಾಡಬೇಕಾಗುವದಿಲ್ಲ. ನಾನು ದುರ್ಬಲ ಪ್ರಕೃತಿಯ ಮನುಷ್ಯ. ನೀನಾದರೋ ಹಾಗಲ್ಲ. ಧೃಡನಿಶ್ಚಯದವಳು."

"ಅದರಲ್ಲಿ ಬದಲಾವಣೆಯಾಗಲಾರದು. ನಾನು ಚನ್ನಾಗಿ ಯೋಚಿಸಿಯೇ ಆ ನಿರ್ಧಾರಕ್ಕೆ ಬಂದಿರುವೆ."

ಈ ಪೀಠಿಕೆಯೆಲ್ಲ ಸೋಮೇಂದ್ರನ ಸಲುವಾಗಿಯೇ ಇರಬಹುದೆಂದು ಭಾವಿಸಿದ್ದ. "ಇದೆಲ್ಲ ಪ್ರಸ್ತಾವನೆಯಾಯಿತು. ನೀನು ಯೋಚಿಸಿರು

ವದಾದರೂ ಏನು? ನಾನೆಂದೂ ನಿನಗೆ ಅಡ್ಡಿಮಾಡುವದಿಲ್ಲ. ಹೇಳು ನೋಡುವಾ."

"ಹೇಗಾದರೂ ಅಣ್ಣನ ಮನೆಯಲ್ಲಿ ನನ್ನ ನಿರ್ವಾಹವಾಗುತ್ತಿತ್ತು. ಅಲ್ಲಿ ನನಗಾವ ತೊಂದರೆಯೂ ಇರಲಿಲ್ಲ. ನಾನು ನಾಳೆ ಅಲ್ಲಿಯೇ ಹೋಗ ಬೇಕೆಂದು ನಿಶ್ಚಯಿಸಿರುವೆ."

"ಅಣ್ಣನಲ್ಲಿಗೆ ಹೋದರೆ ಎಂದು ಬರುವಿ?"

"ಕ್ಷಮಿಸಿ ನನ್ನನ್ನು. ನಾನಿನ್ನು ಬರಲಾರೆ. ನಾನಿಲ್ಲಿ ದಿನಗಳೆಯು ವಂತೆ ತೋರದ್ದರಿಂದ, ಹೀಗೆ ನಿರ್ಣಯಿಸಿರುವೆ."

ಉಷೆಯ ಮಾತು ಕೇಳಿ ಶೈಲೇಶ ಕಲ್ಲಿನ ಪ್ರತಿಮೆಯಂತೆ ಕುಳಿತುಬಿಟ್ಟ. "ಕಬ್ಬಿಣದ ಬಾಗಿಲು ಬಂದಾಯಿತು ಜಗತ್ತಿನ ಯಾವ ಶಕ್ತಿಯೂ ಇದನ್ನು ಭೇದಿಸಲಾರದು" ಎಂದು ಒಳದನಿ ನುಡಿಯಿತು.

## ೧೦

ಶೈಲೇಶ ಎದ್ದಾಗ ತಾನು ರಾತ್ರಿಯೆಲ್ಲ ಭಯಂಕರ ಸ್ವಪ್ನ ಕಂಡಂತೆ ಅನಿಸಿತು. ಕಿಡಿಕಿಯಿಂದ ಹಣಿಕಿಕ್ಕಿದ. ಉಷೆಯು ಎಂದಿನಂತೆ ಗೃಹಕೃತ್ಯ ದಲ್ಲಿ ತೊಡಗಿದ್ದಳು. ಸೋಮೇಂದ್ರನೂ ಅವಳ ಬೆನ್ನುಗಿದ್ದ. ಅತ ತಿನ್ನಲು ಬೇಕೆಂದು ಹಟಮಾಡುತ್ತಿದ್ದ. ಆಕೆ ಕೆಳಗಿಳಿದು ಬರುವಾಗ ಶೈಲೇಶನು ಕಣ್ಣಿಗೆ ಬಿದ್ದುದರಿಂದ "ಅಡಿಗೆಯವ ಚಹಾ ತಯಾರಿಸಿದ್ದಾನೆ. ಆರೀತು ಬೇಗ ಬನ್ನಿ" ಎಂದಳು.

"ಒಳ್ಳೇದು, ನಾನು ಈಗಲೇ ಬರುವೆ" ಎಂದು ಉತ್ಸಾಹದಿಂದ ಸ್ನಾನ ಗೃಹಕ್ಕೆ ಹೋದ. "ನಾನೆಂತಹ ಹುಚ್ಚ? ಗಂಡಹೆಂಡಿರಲ್ಲಿ ಮತಭೇದ ವಾದಾಗ ಹೇಳಿದ ಮಾತನ್ನೇ ಭೀಷ್ಮ ಪ್ರತಿಜ್ಞೆಯೆಂದು ಭಾವಿಸಿ ಇಡೀ ರಾತ್ರಿ ಯನ್ನೆಲ್ಲ ಚಿಂತೆಯಲ್ಲಿ ಕಳೆದೆ" ಎಂದು ಯೋಚಿಸಿ ತನ್ನಲ್ಲಿಯೇ ನಾಚಿಕೆಪಟ್ಟು ಕೊಂಡ.

"ಗಂಡ ಹೇಳಿದ ಒಂದು ಮಾತಿಗೇ ಹೆಂಡತಿ ಮನೆಬಿಟ್ಟು ತವರುಮನೆ ಸೇರುವದಾದರೆ ಜಗತ್ತು ಹೇಗೆ ನಡೆದೀತು? ಒಂದುವೇಳೆ ಸೋಮೇಂದ್ರನ ತಾಯಿ ಹೀಗೆ ಮಾಡಿದರೂ ಮಾಡಬಹುದಿತ್ತು. ಆದರೆ ಉಷೆಯಂಹತ

ಹಿಂದೂ ಸಂಸ್ಕೃತಿಯಲ್ಲಿ ಬೆಳೆದ ಕನ್ಯೆ ಗಂಡನನ್ನು ಬಿಟ್ಟು ಹೋಗುವುದು ಅಸಂಭಾವ್ಯವೇ ಸರಿ.. ಸಿಟ್ಟಿನ ಭರದಲ್ಲಿ ಹೊರಬಿದ್ದ ಮಾನ್ನೇ ಸತ್ಯವಾಗಿ ಸಲು ತನ್ನ ಸಂಸ್ಕಾರಗಳಿಗೆಲ್ಲ ತಿಲಾಂಜಲಿಯೆರೆಯಲಾರಳು. ಇಂತಹ ಕ್ಷುಲ್ಲಕ ಸಂಗತಿಗಳಿಗೆ ನಾನಿಷ್ಟು ಅಂಜಬೇಕೇ'' ಎಂದು ಯೋಚಿಸಿ ಧೈರ್ಯ ತಂದುಕೊಂಡ. ಮನಸ್ಸು ಶಾಂತಿಪ್ರೇಮಗಳಿಂದ ಓತಪ್ರೋತವಾಯಿತು.

ವಿಭಾಳಂತಹ ಆಧುನಿಕ ವಿದ್ಯಾವಿಭೂಷಿತಳೊಡನೆ ಉಷೆಯ ತುಲನೆ ಮಾಡುವುದು ಆತನಿಗೆ ಸಮಂಜಸವೆನಿಸುತ್ತಿರಲಿಲ್ಲ. ಆದರೆ ಅದೇಕೋ ಇಂದು ಆ ಪ್ರೇರಣೆಯಾಯಿತು. ಆತ ಸಿಟ್ಟುಸಿಟ್ಟು ''ಇರಲಪ್ಪಾ, ನನ ಗೆಂದಾದರೂ ಹುಡುಗಿ ಹುಟ್ಟಿದರೆ ತಾಯಿಯಂತೇ ಆದರೆ ಸಾಕು'' ಎಂದು ಯೋಚಿಸುತ್ತ ಗಡಿಬಿಡಿಯಿಂದ ತನ್ನ ಓದುವ ಕೋಣೆಗೆ ಹೋದ.

ಹೊಸದಾಗಿ ಬಂದ ಅಡಿಗೆಯವನು ಚಹಾ, ರೊಟ್ಟಿ, ಮಾಂಸ, ಕೇಕು ಇತ್ಯಾದಿ ಫಲಾಹಾರದ ಸಾಮಗ್ರಿ ತಂದಿಟ್ಟಿದ್ದ. ಇದನ್ನೆಲ್ಲ ಕಂಡು ಶೈಲೇಶ ನಿಗೆ ಏನೋ ಎನ್ನಿಸಿತು: ಮೊದಲಿನಿಂದಲೂ ಇದೇ ಜೀನಸನ್ನು ತಿಂದ ಅಭ್ಯಾಸ. ಈ ನಡುವೆ ಉಷೆಯು ಬಂದಂದಿನಿಂದ ಮಾತ್ರ ತಪ್ಪಿದ್ದಿತು. ಆಕೆ ತಾನೇ ತಯಾರಿಸಿದ ಉಪ್ಪಿಟ್ಟನ್ನು ತಾನೇ ಬಡಿಸಿ ತಿನ್ನುವ ವರೆಗೂ ಅಲ್ಲಿಯೇ ಕೂತಿರುತ್ತಿದ್ದಳು. ಆದರ ಈ ಹೊತ್ತು ಆಕೆ ಇನ್ನೂ ಬರಲಿಲ್ಲ. ಅದಕ್ಕಾಗಿ ಆತನಿಗೆ ತಿನ್ನಲು ಮನಸ್ಸಾಗಲಿಲ್ಲ. ಅವನ್ನೇ ನೋಡುತ್ತ ಸುಮ್ಮನೆ ಕುಳಿತ. ಆ ಮೇಲೆ ಒಂದು ಕಪ್ಪು ಚಹಾ ಕುಡಿದು ಅಡಿಗೆಯ ವನಿಗೆ ಸಾಮಗ್ರಿಗಳನ್ನೆಲ್ಲ ತಿರುಗಿ ತೆಗೆದುಕೊಂಡ ಹೋಗಲು ಹೇಳಿದ.

ಶೈಲೇಶ ಪರಿಚಿತ ಪದಧ್ವನಿ ಕೇಳಿಸಬಹುದೆಂದು ಕಿವಿ ನಿಮಿರಿಸಿ ಕೊಂಡು ಕುಳಿತ. ಆಕೆ ಫಲಾಹಾರವೇಕೆ ಮಾಡಿಲ್ಲವೆಂದರೆ ತುಸು ಗಡುಸಾ ಗಿಯೇ ಉತ್ತರಕೊಡಬೇಕೆಂದು ಯೋಚಿಸಿದ್ದ. ಆದರೆ ಪದಧ್ವನಿಯೇನೋ ಕೇಳಿಸಿತು ಬೇಕಾದ ಮೋರೆ ಬರಲಿಲ್ಲ. ಆಳು ಬಂದು ಪಾತ್ರೆ ತೆಗೆದು ಕೊಂಡು ಹೋದ. ಆದರೂ ಉಷೆಯು ಅಲ್ಲಿ ಬರಲಿಲ್ಲ.

ಸಾವಕಾಶವಾಗಿ ಹೊತ್ತೇರಿತು. ಸ್ನಾನ ಊಟ ತೀರಿಸಿ ಶೈಲೇಶನಿಗೆ ಕಾಲೇಜಿಗೆ ಹೋಗಬೇಕಾಗಿತ್ತು. ಊಟ ಮಾಡುವಾಗ ಉಷೆಯು ಹತ್ತಿರ ಬಂದು ಕುಳಿತರೂ ಹಿಂದಿನ ಹಾಗೂ ಇಂದಿನ ವರ್ತನೆಯಲ್ಲಿ ಏನೋ ಕೊರತೆ

ಯುದ್ಧಂತೆ ಕಂಡುಬರುತ್ತಿತ್ತು. ಒಂದೇ ರಾತ್ರಿಯಲ್ಲಿ ಎಂತಹ ಅಭ್ಯಂತರ ವಾಗಿದೆಯೆಂದು ತಿಳಿದು ಚಕಿತನಾದ. ಡ್ರೆಸ್ಸು ಹಾಕಿಕೊಳ್ಳಲು ಕೋಣೆಗೆ ಹೋದಾಗ ಅಲ್ಲಿಟ್ಟ ಜಮಾಖರ್ಚಿನ ಪಟ್ಟಿಯ ಮೇಲೆ ಆತನ ಕಣ್ಣು ಬಿದ್ದಿತು. ಈ ಪಟ್ಟಿ ನಿನ್ನೆಯಿಂದಲೂ ಇಲ್ಲಿಯೇ ಬಿದ್ದಿರಬೇಕೆಂದು ಅನಿಸಿತು. ಅಥವಾ ಉಷೆಯೇ ಇಂದು ನನ್ನ ಕಣ್ಣಿಗೆ ಬೀಳಲೆಂದು ಇಟ್ಟಿದ್ದರೂ ಇಟ್ಟಿರಬಹು ದೆಂದು ಭಾವಿಸಿದ. ಇಂದೇನು ತಿಂಗಳಿನ ಕೊನೆಯ ದಿನವಲ್ಲ. ಅಂದಬಳಿಕ ಅದನ್ನು ಇಲ್ಲಿಟ್ಟಿರುವ ಅವಶ್ಯಕತೆ ಏನು? ಈ ಯೋಚನೆಯಲ್ಲಿ ಕಟ್ಟಿಕೊಳ್ಳ ಬೇಕೆಂದಿದ್ದ ಟ್ಯಾ ಕೈಯ್ಯಲ್ಲೇ ಉಳಿಯಿತು. ಅರ್ಧ ಕುತೂಹಲ, ಅರ್ಧ ಅನ್ಯಮನಸ್ಕತೆಯಿಂದೊಡಗೂಡಿ ಒಂದೊಂದೇ ಹಾಳೆ ಮಗ ಚಿದ. ಕೊನೆಯ ಪುಟಕ್ಕೆ ಹೋಗಿ ನಿಂತ. ಎಲ್ಲದರ ಮೇಲೂ ಸುಮಾರಾಗಿ ಒಂದೇ ಲೆಕ್ಕ. ಅದೇ ಮೀನು, ಕಾಯಿಪಲ್ಲೆ, ಬಟಾಟೆ, ಅಕ್ಕಿ, ಕೇಕು, ಹಾಲು, ನೌಕರರ ಪಗಾರ ಇತ್ಯಾದಿ. ಲೆಕ್ಕವೆಲ್ಲ ಕನ್ನಡಿಯ ಹಾಗಿತ್ತು. ಕೈಯ್ಯಲ್ಲಿದ್ದ ಶಿಲ್ಕು ತಿಳಿಯುವಂತಿತ್ತು.

ಉಷೆಯು ಲೆಕ್ಕ ಬರೆಯಲು ಆರಂಭಿಸಿದ ದಿನ ಶೈಲೇಶ ಪ್ರಯಾಗ ದಲ್ಲಿದ್ದ. ಆ ಲೆಕ್ಕ ಬರೆಯಲು ಪ್ರೇರಿಸಿದವನೂ ಆತನಲ್ಲ; ಬಂದ ಮೇಲೆ ನೆರವಾದುದೂ ಅಷ್ಟಕ್ಕಷ್ಟೇ. ಮುಂದೆ ಬರೆಯದಿದ್ದರೂ ಆತನಿಗಾಗುತ್ತಿದ್ದ ದುಃಖವೂ ಅಷ್ಟರಲ್ಲೇ ಇದೆ. ಮನೆಯ ಲೆಕ್ಕ ಬರೆದಿಡುವ ರೂಢಿ ಅವರಲ್ಲಿ ಹಿಂದಿನಿಂದಲೂ ಇದ್ದಿಲ್ಲ. ಅದು ಬರೆಯದಿದ್ದರೆ ಹಾನಿಯಾದೀತೆಂಬ ಶಂಕೆಯೂ ಇರಲಿಲ್ಲ. ಆದರೆ ಇಂದು ಆ ಲೆಕ್ಕವನ್ನೆಲ್ಲ ನೋಡಿ ಆತನ ಮನದಲ್ಲಿ ಎಂತೆಂತಹವೋ ಕಲ್ಪನೆಗಳು ಸುಳಿದುಹೋದುವು. ಪಟ್ಟಿಯನ್ನು ಮುಚ್ಚಿ ತಿರುಗಿ ಟ್ಯಾ ಕಟ್ಟಲು ಪ್ರಾರಂಭಿಸಿದ. "ಜಗತ್ತಿನಲ್ಲಿ ಯಾವ ಚಿಪ್ಪಿ ನಲ್ಲಿ ಯಾವ ಮುತ್ತಿದೆಯೋ ಯಾರು ಬಲ್ಲರು?" ಎಂದು ಯೋಚಿಸಿದ.

ಕಾಲೇಜಿಗೆ ಹೊರಟಾಗ ಉಷೆಯನ್ನು ಕರೆದು ಸಂಶಯ ನಿವೃತ್ತಿ ಮಾಡಿಕೊಳ್ಳಬೇಕೆಂದು ಬಯಸಿದನಾದರೂ ಕರೆಯಲು ಧೈರ್ಯವಾಗಲಿಲ್ಲ. ಮುಂದೇನಾದೀತೋ ಎಂಬ ಶಂಕೆಯಲ್ಲಿ ಆತನ ಮನಸ್ಸು ಕಳವಳಗೊಳ್ಳು ತ್ತಿತ್ತು. ಈ ಅನಿಶ್ಚಿತ ಶಂಕೆಯು ನಿಶ್ಚಿತವಾಗಿಯೂ ದುರ್ಘಟನೆಯಲ್ಲಿ ಪರಿಣಮಿಸಬಹುದೆಂದು ತಿಳಿಯಲು ಮನಸ್ಸು ಒಡಂಬಡಲಿಲ್ಲ.

## ೧೧

ಕಾಲೇಜು ಬಿಟ್ಟನಂತರ ಶೈಲೇಶ ಮನೆಗೆ ಬರದೆ ನೆಟ್ಟಗೆ ವಿಭಾಳ ಮನೆಗೆ ಹೋದ. ಅಲ್ಲಿ ಹೋದ ಮೇಲೆ ತನ್ನ ಊಹೆ ತೀರ ಸುಳ್ಳಾಗಲಿಲ್ಲವೆಂದು ಕಂಡುಬಂತು. ಭಾವ ಕಚೇರಿಗೆ ಹೋಗಿರಲಿಲ್ಲ. ಅಲ್ಲದೆ ಗಂಡಹೆಂಡಿರಲ್ಲಿ ಮತಭೇದವಿರಲಿಲ್ಲ. ಇದನ್ನು ಕಂಡು ಶೈಲೇಶನಿಗೆ ಸಂತೋಷವಾಯಿತು. "ವಿಭಾ, ಸೋಮೇಂದ್ರನನ್ನು ಕರೆಯಲು ಜನ ಕಳಿಸಲಿಲ್ಲವಲ್ಲ" ಎಂದು ಕೇಳಿದ.

ವಿಭಾಳು ಏನೋ ಹೇಳುವುದರಲ್ಲಿದ್ದಳು. ಆದರೆ ಕ್ಷೇತ್ರಮೋಹನನೇ ,"ಆನೆ ಕೊಳ್ಳುವವರು ಈಗ ಇಲ್ಲ" ಎಂದು ನುಡಿದ.

"ಅಂದರೇನು?"

"ಯಾರೋ ಒಬ್ಬ ಹೆಂಡಗುಡುಕನಿದ್ದ. ಅಮಲೇರಿದಾಗ "ರಾಜನ ಆನೆಯನ್ನೇ ಖರೀದಿಸುತ್ತೇನೆ" ಎಂದುಬಿಟ್ಟ. ಮಾರನೇ ದಿನ ಅರಸನ ಸೇವಕರು ಅವನನ್ನು ರಾಜನ ಮುಂದೆ ತಂದು ನಿಲ್ಲಿಸಿ ಇಂತಹ ಹುಚ್ಚುತನ ಏಕೆ ಮಾಡಿದೆ ಎಂದು ಕೇಳಿದರು. ಆಗ ಆತ ಕೈಜೋಡಿಸಿ "ಇಲ್ಲ ಸರಕಾರ್, ನನಗೆ ಆನೆಯ ಅವಶ್ಯಕತೆ ಇಲ್ಲ" ಎಂದನಂತೆ. ಅಂದರಂತೆಯೇ ಈಗ ಆನೆ ಖರೀದಿ ಮಾಡುವವರು ಇಲ್ಲಿ ಇಲ್ಲ" ಎಂದು ನಗತೊಡಗಿದ ನಗೆಯು ನಿಂತಮೇಲೆ "ಶೈಲೇಶ, ಈ ಕತೆಯನ್ನು ಅತ್ತಿಗೆಗೆ ಹೇಳಿ ಆಕೆ ಬೇಸರ ಪಟ್ಟುಕೊಳ್ಳದಂತೆ ತಿಳಿಸು. ತಾಯಿಯನ್ನು ಬಿಟ್ಟು ಅತ್ತೆಯ ಹತ್ತಿರ ಮಗನು ಸುಧಾರಿಸುವದಾದರೆ ಎಲ್ಲಿಂದಾದರೂ ಸಾಲಮಾಡಿ ವಿಭಾಳಿಗೆ ಆನೆಯನ್ನೇ ಕೊಂಡುಕೊಡುವೆ" ಎಂದು ಹೇಳಿ ವಿಭಾಳ ದೃಷ್ಟಿಗೆ ಬೀಳದಂತೆ ಮುಖ ಮರೆಸಿ ನಗತೊಡಗಿದ. ಆದರೆ ಶೈಲೇಶ ನಗಲಿಲ್ಲ. ತಾನೂ ನಕ್ಕರೆ ಹಿಂದಿನ ಸಿಟ್ಟು ಇನ್ನೊಮ್ಮೆ ನೆಗೆದೇಳಬಹುದೆಂಬ ಭೀತಿ ಆತನಿಗೆ. ಆದರೆ ನಗೆ ಬಿಗಿಹಿಡಿಯಲು ಆತನಿಗೂ ಅತ್ಯಂತ ಪ್ರಯಾಸವಾಯಿತು.

ಆ ಮೇಲೆ ಕ್ಷೇತ್ರಮೋಹನ ಶೈಲೇಶನಿಗೆ ಬಂದ ಕಾರಣವನ್ನು ಕೇಳಿ "ಅದುದಾದರೂ ಏನು?" ಎಂದ.

"ಸೋಮೇಂದ್ರನ ಭಾರವನ್ನು ವಿಭಾಳು ಹೊತ್ತದ್ದರಿಂದ ನಾನು ನಿಶ್ಚಿಂತನಾಗಿದ್ದೆ. ಆದರೆ ಈಗ ಬೇರಾವುದಾದರೂ ಉಪಾಯವನ್ನು ಮಾಡಲೇ ಬೇಕಾಯಿತು."

"ಅಂದರೆ—? ಉಷಾಳ ಜೊತೆಗೆ ಮಗನಿದ್ದರೆ ಕೆಟ್ಟೇ ಹೋಗುವನೆಂದು ನೀನು ತಿಳಿದಿರುವಿಯಲ್ಲವೇ?"

"ಹಾಗೇನಿಲ್ಲ. ಆದರೆ ಉಷೆಯು ತಾನಾಗಿಯೇ ಹೋಗಲಿದ್ದಾಳೆ."

"ಹೋಗುವಳೇ? ಎಲ್ಲಿ?"

"ಬಂದಲ್ಲಿಗೆ—ಅಣ್ಣನ ಮನೆಗೆ"

ಕ್ಷೇತ್ರಮೋಹನ ಗಂಭೀರವಾಗಿ ಹೆಂಡತಿಯನ್ನು ಕ್ರೂರವಾಗಿ ನೋಡಿ "ನನಗೂ ಇದೇ ಶಂಕೆಯಿತ್ತು" ಎಂದ,

ಇಷ್ಟು ಹೊತ್ತು ಮೌನವಾಗಿದ್ದ ವಿಭೆಯು ಈಗ ಬಾಯಿ ತೆರೆದಳು. ತನ್ನ ಗಂಡನ ಗುಣ—ವಾಣಿ ಆಕೆಗೆ ಗೊತ್ತಿಲ್ಲದೆ ಇದೆಯೇ? ಅದಕ್ಕಾಗಿ ಆಕೆ ಸಹಜಸ್ವರದಿಂದಲೇ ನುಡಿದಳು:—"ಏನಣ್ಣಾ, ನನ್ನನ್ನು ನೆವಕ್ಕೆ ಮುಂದೂಡಿ ಈ ಯೋಚನೆ ನಡಿಸಿರುವೆಯಾ? ನಿನಗೆ ಹಾಗೇ ಇಚ್ಛೆ ಇದ್ದುದಾದರೆ ನಾನೇನೂ ತಡೆಯಲಾರೆ. ಆದರೆ ನಿಮ್ಮಿಬ್ಬರಿಗೂ ಒಂದಲ್ಲ ಒಂದುದಿನ ಅಳುವ ಪ್ರಸಂಗ ಬಂದೀತು."

ಶೈಲೇಶ ಬೆಳಿಗ್ಗಿನಿಂದ ನಡೆದ ಯಾವತ್ತೂ ಘಟನೆಗಳನ್ನು—ಮುಸಲ್ಮಾನ ಅಡಿಗೆಯವ ಬಂದುದು—ಲೆಕ್ಕದ ಪಟ್ಟಿಯ ವಿಷಯ ಇವೆಲ್ಲವನ್ನೂ ಹೇಳಿದ. ಆ ಮೇಲೆ "ಆಕೆಗೆ ಹೋಗಲಿಕ್ಕೆ ನಾನಾಗಿ ಹೇಳಲಿಲ್ಲ. ಆಕೆಯೇ ಹೋಗಲೇಬೇಕೆಂದು ಹಟಹಿಡಿದಿದ್ದರೆ ನಾನು ನಿಲ್ಲೆಂದು ಒತ್ತಾಯ ಮಾಡುವಂತಿಲ್ಲ. ಇದರಿಂದ ನನ್ನ ಪರಿಚಿತರಲ್ಲಿ ಹಾಗೂ ಗೆಳೆಯರಲ್ಲಿ ಅವಮಾನವಾದೀತೆಂಬುದನ್ನು ಅರಿತಿರುವೆ ಆದರೆ ನನ್ನ ಮೈಮೇಲಿನ ಹೊರೆಯೊಂದು ಇಳಿದ ಹಾಗೆ. ಈ ಎಲ್ಲ ಸಂಗತಿ ನಿಮಗೊಬ್ಬರಿಗಾದರೂ ತಿಳಿದಿರಲೆಂದು ಇಂದು ಇಲ್ಲಿಗೆ ಬಂದೆ. ನನ್ನಲ್ಲಿ ದೋಷವಿಲ್ಲವೆಂದು ನೀವಾದರೂ ತಿಳಿದುಕೊಂಡರೆ ಸಾಕು."

"ಭವಾನೀಪುರದಲ್ಲೊಮ್ಮೆ ಒಂದು ಘಟನೆ ನಡೆದಿತ್ತಲ್ಲ? ಅದರ ವ್ಯವಸ್ಥೆಯೇನಾಯಿತು?"

ಕ್ಷೇತ್ರಮೋಹನನ ಈ ಮಾತು ಕೇಳಿ ಶೈಲೇಶನಿಗೆ ಸಿಟ್ಟು ಬಂದಿತು. "ನಿನ್ನ ನಾಲಗೆಯಿಂದಲೂ ಇಂತಹ ಮಾತು ಬರಬಹುದೇ? ಮಾಯದ ಗಾಯದ ಮೇಲೆ ಉಪ್ಪು ನೀರೆರಚುತ್ತಿರುವಿಯೆಂಬುದರ ಕಲ್ಪನೆ ನಿನಗಾಗದೇ''?

"ಅದೇನೋ ಸರಿ. ಆದರೆ ಆ ಮಾಯದ ಗಾಯ ಯಾವುದೆಂದು ಸರಿಯಾಗಿ ಊಹಿಸಲಾರೆನಲ್ಲ!''

"ಹೆಂಡತಿಯೊಡನೆಯೇ ಆ ರೀತಿ ವ್ಯವಹರಿಸಿದ ನಿನ್ನಿಂದ ಇದಕ್ಕೂ ಹೆಚ್ಚಿನ ಆಸೆಮಾಡುವುದು ಹುಚ್ಚೇ ಸರಿ. ನಿನಗೆ ಅಪಮಾನವಾದೀತೆಂದು ಸುಮ್ಮನಿದ್ದೆ. ಇಲ್ಲವಾದರೆ ಎಂದೋ ಆಡಿಬಿಡುತ್ತಿದ್ದೆ.''

"ನಿನ್ನ ಮಾತು ನಿಜ. ಆ ವಿಷಯವನ್ನು ನಾನಿನ್ನೂ ಸರಿಯಾಗಿ ತಿಳಿದುಕೊಂಡಿಲ್ಲ. ಇತ್ತ ಜ್ಞಾನಾರ್ಜನೆ ಮಾಡುವ ವಯಸ್ಸೂ ಮೀರಿ ಹೋಗಿದೆ. ಈ ವಿಷಯವಾಗಿ ನೀನೊಂದು ಪುಸ್ತಕ ಬರೆದರೆ ನಮ್ಮಂತಹ ಪಾಮರರಿಗೆ ಅದೆಷ್ಟೋ ಹಿತವಾದೀತು. ಅಲ್ಲಿಯ ತನಕ ನೀವೇ ಅಣ್ಣತಂಗಿ ಯರು ವಿಚಾರ ನಡೆಸಿರಿ. ನಾನು ಇದೀಗಲೇ ಬರುವೆ."

"ಪುಸ್ತಕ ಬರೆಯಲು ಅವಧಿ ಬೇಕು. ಅದಕ್ಕಾಗಿ ಕೇಳಿಯೇ ಹೋಗು. ಭವಾನಿಪುರದಲ್ಲಿಯ ಘಟನೆಯ ಬಗ್ಗೆ ಅವರು ಕಾಳಜಿ ಮಾಡದಿದ್ದರೂ ನಾನು ಕಾಳಜಿ ಮಾಡಲೇಬೇಕು.''

"ಸುಮ್ಮನೇ ನೀನು ಇಷ್ಟೊಂದು ದಿನ ಕಳೆದೆ. ಈಗಲಾದರೂ ವಿಳಂಬ ಮಾಡಬೇಡ" ಎಂದು ಹೊರಟು ಹೋದ.

ಮಾರನೇ ದಿನ ಬೆಳಗ್ಗೆ ಕ್ಷೇತ್ರಮೋಹನನು ಪಟಲಡಾಂಗಾಕ್ಕೆ ಬಂದ. ಶೈಲೇಶ ಸ್ನಾನದ ಸಿದ್ಧತೆಯಲ್ಲಿದ್ದ. ಭಾವನನ್ನು ಆಕಸ್ಮಿಕವಾಗಿ ಕಂಡು ಚಕಿತನಾದ. ನಿನ್ನೆ ಅಷ್ಟೊಂದು ವಾದವಿವಾದ ಮಾಡಿದ ಮನುಷ್ಯ ಕರೆಯದೆ ಇಂದೇ ಬಂದು ಮೋರೆ ತೋರಿಸುವನೆಂದು ಊಹಿಸಿರಲಿಲ್ಲ. ಮನದಲ್ಲಿಯೇ ನಾಚಿಕೆಪಟ್ಟುಕೊಂಡ.

"ಇಂದೇನು ಹ್ಯಾಕೋರ್ಟು ಬಂದಾಗಿದೆಯೇ?"

"ನಾನು ಹೋಗದಿದ್ದರೆ ಹ್ಯಾಕೋರ್ಟೇಕೆ ಬಂದಾಗಬೇಕು?"

"ಹಾಗಾದರೆ ಪ್ರ್ಯಾಕ್ಟೀಸು ಬಿಟ್ಟೆಯಾ?"

"ಇದು ನಿನ್ನಂತಹನು ಕೇಳುವ ಪ್ರಶ್ನೆಯಲ್ಲ."

"ಹಾಗಾದರೆ ನಾನೇ ನಿರರ್ಥಕನಾಗಿರಬಹುದು. ಇರಲಿ, ನಾನೀಗ ಸ್ನಾನಮಾಡಿ ಬರುವೆ."

"ಆಗಲಿ, ಹೋಗಿ ಬಾ."

ಆ ಮೇಲೆ ಆತ ಒಳಹೊಕ್ಕು "ಅಕ್ಕಾ, ನಾನು ಬರಬಹುದೇ?" ಎಂದು ಕೇಳಿದ.

ಆ ಮನೆಯಲ್ಲಿ ಪೂಜೆಗಾಗಿ ಇನ್ಯಾವ ಸ್ವತಂತ್ರ ಕೋಣೆಯೂ ಇರಲಿಲ್ಲ. ಮಲಗುವ ಕೋಣೆಯಲ್ಲಿಯೇ ಒಂದು ಬದಿಯಲ್ಲಿ ಪೂಜೆಯ ಸಿದ್ಧತೆ ನಡಿಸಿದ್ದಳು. ಪರಿಚಿತ ಕಂಠಸ್ವರವಾದುವರಿಂದ ತಲೆಯ ಸೆರಗನ್ನೆಳೆದು 'ಬನ್ನಿ' ಎಂದು ಸ್ವಾಗತಿಸಿದಳು.

ಅಲ್ಲಿಯ ಸಿದ್ಧತೆ ಕಂಡು ಕ್ಷೇತ್ರಮೋಹನನಿಗೆ ಸಂಕೋಚವೆನಿಸಿತು. "ಅಕ್ಕ ನಾನೀಗ ಬರಬಾರದಿತ್ತು."

ಆದರೆ ಒಮ್ಮಿಂದೊಮ್ಮೆಲೇ ತಾಯಿಯ ಮನೆಗೆ ಹೋಗುವ ಬಯಕೆ ನಿಮಗೆಲ್ಲಿಂದ ಬಂತು? ತಂದೆಯವರ ಪ್ರಕೃತಿಯೇನು ನೆಟ್ಟಗಿಲ್ಲವೇ?"

"ತಂದೆ ಎಂದೋ ಸ್ವರ್ಗಸ್ಥನಾಗಿರುವ."

"ಹಾಗಾದರೆ ತಾಯಿಗೇನು ಕಾಯಿಲೆಯೇ?"

"ಆಕೆ ತಂದೆಗಿಂತ ಮೊದಲೇ ಸ್ವರ್ಗ ಸೇರಿದ್ದಾಳೆ."

"ಹಾಗಾದರೆ ನೀವೆಲ್ಲಿ ಹೋಗುವಿರಿ? ಅಲ್ಲಿ ಇದ್ದವರಾದರೂ ಯಾರು? ಹೀಗಾದರೆ ನಿಮ್ಮನ್ನೆಂದಿಗೂ ಹೋಗಗೊಡುವದಿಲ್ಲ. ಶೈಲೇಶನ ಮಾತು ಬಿಟ್ಟುಬಿಡಿ. ನಾವು ಯಾರೂ ಇದನ್ನು ಒಪ್ಪುವಂತಿಲ್ಲ."

"ಒಪ್ಪುವುದಿಲ್ಲವೇ?"

"ಇಲ್ಲ. ಎಂದಿಗೂ ಒಪ್ಪಲಾರೆವು."

" ಆದರೆ ಕ್ಷೇತ್ರಬಾಬುಗಳೇ, ನಾನು ಇಷ್ಟೆಲ್ಲ ದಿವ ದೂಡಿದುದೂ ಅಣ್ಣನಲ್ಲಿಯೇ. ಒಂದುದಿನವೂ ಆತನಿಗೆ ಭಾರವೆನಿಸಿಸಲಿಲ್ಲ. "

" ನೀವು ನಿರ್ಧಾರ ಮಾಡಿದುದೇ ಆದರೆ ಎಂದು ಬರುವಿರೆಂದು ತಿಳಿಸಿ ಹೋಗಿ. ಇಲ್ಲವಾದರೆ ಸೋಮೇಂದ್ರನನ್ನು ಯಾರು ನೋಡಿಕೊಳ್ಳುವವರು ?"

" ಸೋಮೇಂದ್ರನ ಅತ್ತೆ ಇದ್ದಾಳೆ. "

" ಆಕೆ ನನ್ನ ಹೆಂಡತಿಯಾದುದರಿಂದಲೆ ನಾನು ಕ್ಷಮೆ ಕೇಳಿಕೊಂಡರಾದರೂ ನೀವು ಹೋಗುವದನ್ನು ನಿಲ್ಲಿಸುವಿರಾ ? "

ಉಷೆಯು ಏನೊಂದೂ ಉತ್ತರಕೊಡಲಿಲ್ಲ. ಮೋರೆ ಕೆಳಗೆಹಾಕಿದಳು. ಕೆಲಹೊತ್ತು ದಾರಿಕಾದರೂ ಉತ್ತರ ಬಾರದಿರಲು ಕ್ಷೇತ್ರಮೋಹನನು ನಿಟ್ಟುಸಿರಿಟ್ಟು " ಪಾಪಕ್ಕೆ ದುಷ್ಪರಿಣಾಮವಿದ್ದೇ ಇದೆ. ತಪ್ಪುಮಾಡಿದವನಿಗೆ ಶಿಕ್ಷೆಯಾಗಬೇಕೆಂಬುದು ನಿಜವಾದರೂ ಅಪರಾಧಿಯ ಪುನರ್ವಿಚಾರವಾಗಬಹುದಲ್ಲವೇ ?" ಎಂದು ಸಾವಕಾಶವಾಗಿ ಕೇಳಿದ.

" ಯಾರೋ ಮಾಡಿದ ಪಾಪಕ್ಕಾಗಿ ಇನ್ನಾರೋ ಫಲ ಭೋಗಿಸಬೇಕೆನ್ನುವಿರಾ ?"

" ತಾವು ಎಂದು ಹೋಗುವಿರಿ ? "

" ಅಣ್ಣ ಕರೆಯಲು ಬಂದೊಡನೆಯೇ ಹೋಗುವೆ ಬಹುಶಃ ನಾಳೆ ಅಣ್ಣ ಬರಬಹುದು. "

" ನಿಮ್ಮೊಡನೆ ಒಂದು ಸಂಗತಿಯನ್ನು ಎಂದೂ ಹೇಳಬಾರದೆಂದು ಮಾಡಿದ್ದೆ. ಆದರೆ ಗುಪ್ತವಾಗಿಟ್ಟರೆ ಪಾಪಮಾಡಿದಂತಾಗುತ್ತದೆಯೋ ಏನೋ ಎಂಬ ಶಂಕೆ ಬರಹತ್ತಿದೆ. ನೀವು ಬರುವುದಕ್ಕಿಂತ ಮೊದಲು ಇನ್ನೊಂದು ವ್ಯಕ್ತಿ ಬರುವ ಸಂಭವವಿತ್ತು. ಆ ಒಳಸಂಚು ಪೂರ್ತಿಯಾಗಿಲ್ಲವೆಂದು ನನಗನಿಸಹತ್ತಿದೆ."

" ಅದನ್ನು ನಾನು ಬಲ್ಲೆ! "

" ಹಾಗಾದರೆ ಯಾರದೋ ಒಬ್ಬರ ಮಾತಿನಿಂದ ರೇಗಿ, ಆ ಒಳಸಂಚು ಯಶಸ್ವಿಯಾಗಗೊಡುವಿರಾ?"

"ಆ ಸಂಚು ಹುಸಿಯಾಗಲಿ, ಗೆಲ್ಲಲಿ· ದಯವಿಟ್ಟು ನನ್ನನ್ನು ಮನ್ನಿಸಿ" ಎಂದವಳೇ ಕೈಜೋಡಿಸಿ ನಿಂತಳು. ಇಷ್ಟೊತ್ತಿನ ನಂತರ ಈಗಲೇ ಆಕೆ ಕ್ಷೇತ್ರಮೋಹನನನ್ನು ಕಣ್ಣೆತ್ತಿ ನೋಡಿದ್ದು.

ಕ್ಷೇತ್ರಮೋಹನ ಚಕಿತನಾಗಿ ಹಾಗೆಯೇ ನೋಡುತ್ತ ನಿಂತ.

೧೨

ಶೈಲೇಶ ಹೆಂಡತಿಯೊಡನೆ ಮಾತನಾಡುವುದನ್ನೇ ಬಿಟ್ಟುಬಿಟ್ಟ. ಆದರೆ ಉಷೆಯ ನಡತೆಯಲ್ಲಿ ಮಾತ್ರ ಎಳ್ಳಷ್ಟೂ ಪರಿವರ್ತನೆಯಾಗಲಿಲ್ಲ. ಮೊದಲಿನಂತೆಯೇ ಮನೆಗೆಲಸಗಳನ್ನು ನಿರ್ವಹಿಸುತ್ತಿದ್ದಳು. ಈ ಮನೆಯನ್ನು ಕೊನೆಯವರೆಗೂ ಬಿಟ್ಟುಹೋಗುವವಳು ಇಷ್ಟೇಕೆ ಆತ್ಮೀಯತೆಯಿಂದ ಕೆಲಸ ಮಾಡುತ್ತಾಳೆಂಬುದೇ ಆತನಿಗೆ ಬಗೆಹರಿಯದ ಒಗಟಾಗಿತ್ತು. ಒಮ್ಮೆ ಹೊಸ ನೌಕರನು ಗೋಡೆ ಹೊಲಸು ಮಾಡಿದುದರಿಂದ ಆಕೆ ಬಯ್ದೂ ಇದ್ದಳು. ದೈನಂದಿನ ಕೆಲಸದಲ್ಲಾವ ನ್ಯೂನತೆಯೂ ಕಂಡುಬರುತ್ತಿರಲಿಲ್ಲ. ಮನೆಯ ವ್ಯವಸ್ಥೆಯನ್ನೂ ಚೆನ್ನಾಗಿಟ್ಟಿದ್ದಳು.

ಉಷೆಯ ಗುಣಸ್ವಭಾವಗಳನ್ನು ಚನ್ನಾಗಿ ಅರಿತುಕೊಳ್ಳಲು ಶೈಲೇಶನಿಗೆ ಅವಕಾಶ ಲಭಿಸಿರಲಿಲ್ಲ. ಮಾನವ ಸ್ವಭಾವದ ಬಗ್ಗೆ ಆತ ತುಂಬಾ ಓದಿದ್ದ. ಅನುಭವವೂ ಇದೆಯೆಂದರೆ ತಪ್ಪಾಗಲಾರದು. ಆದರೆ ಉಷೆಯ ಚಾರಿತ್ರ್ಯ ಮಾತ್ರ ಆತನ ಅನುಭವಕ್ಕೆ ನಿಲುಕಿರಲಿಲ್ಲ.

ಉಷೆಯಲ್ಲಿರುವಂತಹ ಅದ್ಭುತ ಶಕ್ತಿಯನ್ನು ಆತ ಇನ್ನಾರಲ್ಲಿಯೂ ಕಂಡಿರಲಿಲ್ಲ. ಒಂದು ಕಣ್ಣಿನಿಂದ ಅತ್ತರೆ ಇನ್ನೊಂದರಿಂದ ನಗುವವಳು ಆಕೆ.

ಕ್ಷೇತ್ರಮೋಹನನು ನೇರವಾಗಿ ಒಳಹೊಕ್ಕು 'ಅಕ್ಕ, ಪ್ರಸಾದದ ಕೃಪೆಯಾಗಲು ಇನ್ನೆಷ್ಟು ಅವಕಾಶವಿದೆ?" ಎಂದು ಕೇಳಿದ.

"ನಿಮ್ಮ ಭಾವಂದಿರೊಡನೆ ವಿಚಾರಿಸಿ ಬನ್ನಿ. ತಡವಿದ್ದರೆ ಅವರಿಂದಲೇ ಹೊರತು ನನ್ನಿಂದಲ್ಲ."

"ನಿಮ್ಮನ್ನು ಮಾತಿನಲ್ಲಿ ಸೋಲಿಸುವ ಯೋಗ್ಯತೆ ನನ್ನದಲ್ಲವೆಂದು ಬಲ್ಲೆ. ಹೊಟ್ಟೆ ತುಂಬಿದರೂ ನಿಮ್ಮ ಅಡಿಗೆ ಕಂಡು ಇನ್ನಷ್ಟು ಉಣ್ಣೋಣ

ಎಂದೆನಿಸುತ್ತದೆ. ಆದರೆ ತಿಂದಮೇಲೆಲ್ಲಾದರೂ ಪ್ರಕೃತಿ ಕೆಟ್ಟರೆ ಎಂಬುದೇ ಅಂಜಿಕೆ. ಆದರೆ ನಿಮ್ಮ ಆಮಂತ್ರಣವನ್ನು ಅಲ್ಲಗಳೆಯಲಾರೆ. ಇನ್ನೊಂದಾದರೂ ಬರುವೆ. ನಿಮ್ಮ ಮಗನೆಲ್ಲಿದ್ದಾನೆ?''

'' ಶಾಲೆಗೆ ಹೋಗಿದ್ದಾನೆ ಯಾಕೋ ಏನೋ ಎಷ್ಟು ಮಾಡಿದರೂ ಆತನಿಂದು ಶಾಲೆಗೆ ಹೋಗಲಿಕ್ಕೇ ಸಿದ್ಧನಿರಲಿಲ್ಲ ಬಹಳಷ್ಟು ಹೇಳಿದಮೇಲೆ ಇದೀಗ ಊಟ ತೀರಿಸಿ ಹೋಗಿದ್ದಾನೆ.''

'' ಪಾಪ! ಆತ ನಿಮ್ಮನ್ನು ಅಗಲಿರಲಾರ. ಇರಲಿ. ಅಕ್ಕಾ, ತವರು ಮನೆಗೆ ಹೋಗುವ ವಿಚಾರವೇನಾಯಿತು? ಸಿಟ್ಟಿನ ಭರದಲ್ಲಿ ಹೊರಬಿದ್ದ ಮಾತನ್ನೇ ಸತ್ಯವಾಗಿಸಲು ಯತ್ನಿಸುವದಾದರೆ ಜಗತ್ತಿನಲ್ಲಿ ಯಾರನ್ನು ನಂಬಬೇಕೋ ತಿಳಿಯದಾಗಿದೆ.''

ಉಷೆಯು ತಲೆತಗ್ಗಿಸಿ ಮೌನವಾಗಿದ್ದಳು. ಕ್ಷೇತ್ರಮೋಹನನು ಶೈಲೇಶನ ಓದುವ ಕೋಣೆಗೆ ಹೋದ. ಶೈಲೇಶ ಈಗ ತಾನೇ ಮಿಂದು ಕೂದಲನ್ನು ಹಿಕ್ಕುತ್ತಲಿದ್ದ. ಕ್ಷೇತ್ರಮೋಹನನು ಬಂದವನೇ '' ಇಂದೇನು ಕಾಲೇಜಿಲ್ಲವೇ'' ಎಂದು ಕೇಳಿದ.

'' ಇದೆ. ಆದರೆ ಮೊದಲಿನ ಎರಡು ಪಿರೇಡು ಇಲ್ಲ.''

'' ನಿಮ್ಮದೇ ಮಜಾ, ಆಗಲಿ, ಹೆಂಡತಿಯನ್ನು ತವರುಮನೆಗೆ ಕಳಿಸುವ ವಿಷಯ ಏನುಮಾಡಿದೆ?''

'' ಆಕೆ ಹೋದ ಮೇಲೆಯೇ ಮಾಡಬೇಕಾದ ಸಿದ್ಧತೆಯನ್ನೆಲ್ಲ ಮಾಡುವೆ. ನಾಳೆ ಅಣ್ಣ ಬಂದು ಅವಳನ್ನು ಕರೆದುಕೊಂಡು ಹೋಗುವನೆಂದು ಕೇಳಿರುವೆ.''

'' ನೀನೂ ಒಬ್ಬ ಶುದ್ಧ ಹುಚ್ಚ! ಅವಳ ಜೊತೆಗೆ ನೀ ಬಾಳುವೆ ಮಾಡಲಾರೆ. ನಾನೂ ನೀನೂ ಅದಲುಬದಲು ಮಾಡಿಕೊಂಡರೆ ಒಳಿತಾದೀತು. ನಿನಗೂ ಸುಖವಾಗಿ ನಿದ್ದೆ ಬಿದ್ದೀತು, ನನಗೂ ಹಾಗೆಯೇ.''

'' ಇಷ್ಟು ವಯಸ್ಸಾದರೂ ಇಂತಹ ಹೊಲಸು ಮಾತು ಬಿಟ್ಟಿಲ್ಲ!''

''ಮಾಡಬೇಕೆಂತ ಮಾಡುವ ಹಾಸ್ಯವಿದಲ್ಲ. ನಿಮ್ಮ ನಡತೆಯನ್ನು ಕಂಡು ಪ್ರಚೋದನೆಯಾಗುತ್ತಿದೆ. ಆಕೆಗೆ ಬೇಸರವಾದುದರಿಂದ ತವರು

ಮನೆಗೆ ಹೋಗುತ್ತೇನೆಂದು ಹೇಳಿರಬಹುದು. ಅದನ್ನೇ ನೀನು ಮೇಲಿಂದ ಮೇಲೆ ಹಂಗಿಸುತ್ತಿರುವಿಯಲ್ಲ! ಭವಾನಿಪುರದಲ್ಲಿನ್ನೂ ಮಾತು ಮುರಿದಿಲ್ಲ. ನೀವಿಬ್ಬರು—ಅಣ್ಣ ತಂಗಿಯರೆಂದರೆ ಒಂದೇ ಮಾಲಿಕೆಯೊಳಗಿನ ಮಣಿಗಳು. ನನ್ನ ಹೇಳಿಕೆಯಂತೆ ಉಷೆಯು ತನ್ನ ನಿರ್ಧಾರವನ್ನು ಬದಲಿಸುವ ಲಕ್ಷಣ ಕಂಡುಬಂದಿದೆ. ಆದರೆ ನೀನು ಮಾತ್ರ ಅದೇ ವಿಷಯವನ್ನೆತ್ತಿ ಛೇಡಿಸ ಬೇಡ. ಈಗ ಹೊತ್ತಾಯಿತು. ನಾಳೆ ಬರುವೆ'' ಎಂದವನೇ ನಾಲ್ಕು ಹೆಜ್ಜೆ ಮುಂದೆ ಹೋದ. ಆದರೆ ಇನ್ನೇನೋ ನೆನಪಾದುದರಿಂದ ತಿರುಗಿ ಬಂದು ''ಶೈಲೇಶ, ತುಸುದಿನದ ಮಟ್ಟಿಗೆ ಸಂಭಾಳಿಸು. ಆಕೆ ಹುಟ್ಟಿ ಬೆಳೆದುದು ಆಚಾರವಂತರಲ್ಲಿ. ಆಕೆಗೆ ಅನಾಚಾರ ಸಹಿಸದು. ತಿನ್ನುಣ್ಣುನ ತೊಂದರೆ ಯೆಂಬುದೆಲ್ಲ ನೆವ. ಶಾಕಾಹಾರವೇ ಆರೋಗ್ಯಕರ" ಎಂದವನೇ ತೀವ್ರವಾಗಿ ಹೊರಟುಹೋದ.

ಶೈಲೇಶ ತುಸು ಹೊತ್ತಿನ ತನಕ ಸ್ತಬ್ಧನಾಗಿ ನಿಂತ. ಉಷೆಯ ನಿಶ್ಚಯು ವನ್ನು ಹೇಗೆ ಮಾರ್ಪಡಿಸಿದನೆಂಬುದೇ ಆತನಿಗೆ ಬಗೆಹರಿಯುಲಿಲ್ಲ.

ಆಳು ಬಂದು ಊಟಕ್ಕಣಿಯಾಗಿದೆಯೆಂದು ತಿಳಿಸಿಹೋದ. ತಾಟು ಬಡಿಸಿತ್ತು. ತರತರದ ವ್ಯಂಜನವಿತ್ತು. ಉಷೆಯೂ ಹತ್ತಿರದಲ್ಲಿಯೇ ಕುಳಿ ತ್ತಿದ್ದಳು. ಶೈಲೇಶನು ತಲೆಬಾಗಿಸಿ ಉಣ್ಣತೊಡಗಿದ. ಕ್ಷೇತ್ರಮೋಹನನು ಪ್ರಸ್ತಾಪಿಸಿದ ವಿಷಯುವನ್ನು ಕೇಳಿ, ತಾನೂ ಒಂದೆರಡು ಸವಿಮಾತಾಡ ಬೇಕೆಂದು ಯೋಚಿಸಿದ. ಆದರೆ ಏನು ಮಾಡಿದರೂ ತಲೆಯೆತ್ತಲಾಗಲಿಲ್ಲ. ಸೋಮೇಂದ್ರನ ಬಗ್ಗೂ ವಿಚಾರಿಸಲಿಕ್ಕಾಗಲಿಲ್ಲ, ಊಟ ತೀರಿದ ಮೇಲೆ ಸಾವಕಾಶವಾಗಿ ಎದ್ದು ಹೊರಗೆ ಬಂದ.

## ೧೩

ಮಾರನೇದಿನ ಬೆಳಿಗ್ಗೆ ಅವಿನಾಶ ಬಂದು ಮುಟ್ಟಿದ. ಅದೇ ಹೊತ್ತಿಗೆ ಶೈಲೇಶ ಚಹಾ ತೆಗೆದುಕೊಳ್ಳಲು ಹೋಗುತ್ತಿದ್ದ. ಮನೆಯಲ್ಲಿ ಅಪರಿಚಿತ ಮನುಷ್ಯನನ್ನು ಕಂಡು ಚಕಿತನಾಗಿ "ತಾವು ಯಾರು ?" ಎಂದು ಕೇಳಿದ.

"ನಾನು ಉಷೆಯ ತಮ್ಮ. ಅಣ್ಣ ತಾನೇ ಬರಬೇಕೆಂದು ಮಾಡಿದ್ದ. ಸಾಧ್ಯವಾಗದ್ದರಿಂದ ಅಕ್ಕನನ್ನು ಕರೆದುಕೊಂಡು ಬರಲು ನನ್ನನ್ನು ಕಳಿಸಿದ್ದಾನೆ."

"ಒಳ್ಳೇದು, ಕರೆದುಕೊಂಡು ಹೋಗಿ" ಎಂದು ತನ್ನ ಕೋಣೆಗೆ ಹೋದ. ಅಲ್ಲಿ ಫಲಾಹಾರದ ಎಲ್ಲ ಬಗೆಯು ಸಿದ್ಧತೆಯಾಗಿತ್ತು. ಆದರೆ ಒಂದು ಗುಟುಕು ಗಂಟಲಲ್ಲಿ ಇಳಿಯುವುದೂ ಕಷ್ಟವೆಂದೆನಿಸಹತ್ತಿತು. ಹೇಗೋ ಒಂದು ಕಪ್ಪು ಚಹಾ ಕುಡಿದಂತೆ ಮಾಡಿ ಕುರ್ಚಿಯ ಮೇಲೆ ಹೋಗಿ ಕುಳಿತ. ಸಾಮಾನೆಲ್ಲ ಅಸ್ತವ್ಯಸ್ತವಾಗಿದ್ದರೂ ಸರಿಪಡಿಸುವ ಮನಸ್ಸಾಗಲಿಲ್ಲ.

ಒಂದಲ್ಲ ಒಂದು ದಿನ ಆಕೆಯ ತವರಿನಿಂದ ಯಾರಾದರೂ ಕರೆಯಲು ಬರುವರೆಂದು ನಿಶ್ಚಯವಾದಂತಿತ್ತು. ಅದರಿಂದ ಅವಿನಾಶ ಬಂದುದನ್ನು ನೋಡಿ ಶೈಲೇಶ ಚಕಿತನಾಗಬೇಕಾದ ಕಾರಣವೇನೂ ಇರಲಿಲ್ಲ. ಆತನಿಂದ ಯಾವ ನಿರ್ಧಾರಕ್ಕೂ ಬರಲಾಗದೆ ಮನದಲ್ಲಿಯೇ ಕಳವಳಗೊಳ್ಳಹತ್ತಿದ. ಆತನ ಮನಸ್ಸಿಗೆ ಶಾಂತಿ ಇರಲಿಲ್ಲ. ಏನಾಗುತ್ತಿದೆಯೆಂದು ಹೇಳಲು ಬಾರದ ಅವಸ್ಥೆ ಆತನದಾಗಿತ್ತು.

"ಕ್ಷೇತ್ರಮೋಹನ ಇಂದು ಬೆಳಿಗ್ಗೆಯೇ ಬರತಕ್ಕವನಿದ್ದ. ಎಚ್ಚರಿಲ್ಲವೋ ಅಥವಾ ಇನ್ನಾವ ಆವಶ್ಯಕ ಕೆಲಸ ಬಂದಿತೋ ತಿಳಿಯದು. ಆತ ಬಂದಿದ್ದರೆ ಎಲ್ಲವೂ ವಿಶದವಾಗಿ ತಿಳಿಯುತ್ತಿತ್ತು" ಎಂದು ಶೈಲೇಶ ಯೋಚಿಸಿದ. ಆತ ಎದೆ ಗುಂದಿದ್ದ. ತನ್ನ ಬಗ್ಗೆ ವಿಶ್ವಾಸವನ್ನೇ ಕಳೆದುಕೊಂಡಿದ್ದ. ಕಾತರನಾಗಿ ಗಡಿಯಾರದ ಮುಳ್ಳುಗಳನ್ನೇ ದಿಟ್ಟಿಸುತ್ತಿದ್ದ. ಕ್ಷಣವೆಂದರೆ ಯುಗದಂತಾಗಿತ್ತು.

ಅಷ್ಟರಲ್ಲಿ ಬಾಗಿಲ ಪರದೆಯನ್ನು ಸರಿಸಿ ಯಾರೋ ಒಳಗೆ ಬಂದರು. ಕ್ಷೇತ್ರಮೋಹನನೇ ಬಂದಿರಬೇಕೆಂದು ಶೈಲೇಶ ಒಮ್ಮೆಲೇ ಹೊರಳಿ ನೋಡಿದ. ಆದರೆ ಆತ ಅವಿನಾಶಿ. ತಿನ್ನುಣ್ಣುವ ಸಾಮಾನು ನೋಡಿ ಆತ ಖುರ್ಚಿಯೊಂದನ್ನು ಹಿಂದಕ್ಕೆಳೆದುಕೊಂಡು ಕುಳಿತ. ಶೈಲೇಶನು ಕಪಾಟಿನಿಂದೊಂದು ಪುಸ್ತಕ ತೆಗೆದು ಓದಹತ್ತಿದ. ಮನೆಯ ಯಜಮಾನನು ತನ್ನನ್ನು

ಸ್ವಾಗತಿಸುವನೆಂದು ಅವಿನಾಶಿಯೆಂದೂ ತಿಳಿದಿರಲಿಲ್ಲ. ಈ ಕೋಣೆಯಲ್ಲಿ ಏಕೆ ಬಂದೆ ಎಂದೂ ಶೈಲೇಶನು ಕೇಳದ್ದರಿಂದ ಅವಿನಾಶಿಯೇ ಮೊದಲು ಮಾತಾಡಿದ. "೨-೩೦ರ ಗಾಡಿಯಿಂದ ಅಕ್ಕ ಹೋಗಲಿದ್ದಾಳೆ."

ಶೈಲೇಶ ಪುಸ್ತಕದಿಂದ ದೃಷ್ಟಿ ಹೊರಳಿಸಿದ. "ಹೋಗುವಳೇ? ಆದರಲ್ಲೇನೂ ವ್ಯತ್ಯಾಸವಾಗುವಂತಿಲ್ಲ!"

ಅವಿನಾಶನಿಗೆ ಏನೆನ್ನಬೇಕೋ ತಿಳಿಯದಾಯಿತು. ಆತನ ಬಾಯಿಂದ "ಇಲ್ಲ" ಎಂದು ಹೊರಬಿತ್ತು. ಬಾಗಿಲ ಬಳಿಯಲ್ಲಿ ಬಳೆಯ ಸದ್ದು ಕೇಳಿದಂತಾಗಿ ಶೈಲೇಶನ ಮನಸ್ಸು ಇನ್ನಷ್ಟು ಚಂಚಲವಾಯಿತು. "ಇಲ್ಲ; ನಾನೇನೂ ಅವಳನ್ನು ತಡೆದಿಲ್ಲ. ನಿಮ್ಮಣ್ಣ ಬರುತ್ತಾನೆಂದು ಕೇಳಿದ್ದೆ. ಅವನೇಕೆ ಬರಲಿಲ್ಲ?"

"ನನ್ನನ್ನೂ ಆತ ಕಳಿಸಬಾರದೆಂದೇ ಮಾಡಿದ್ದ."

"ಯಾಕೆ?"

ಅವಿನಾಶ ಉತ್ತರಕೊಡಲಿಲ್ಲ.

"ನೀನಿನ್ನೂ ಹುಡುಗ. ನಿನ್ನೊಡನೆ ಎಲ್ಲ ವಿಷಯವನ್ನೂ ಹೇಳಲಾಗುವದಿಲ್ಲ. ಹೇಳುವುದರಿಂದ ಲಾಭವೂ ಇಲ್ಲ; ಅಣ್ಣನಿಗೆ ಹೇಳು, 'ಆಕೆ ಇಲ್ಲಿಂದ ಹೋಗವುದರಲ್ಲಿ ಆವಳದೇನೂ ತಪ್ಪಿಲ್ಲ. ತಪ್ಪೆಲ್ಲ ನನ್ನದೇ, ನಾನು ಆಕೆಯನ್ನು ಕರೆಸುವುದೇ ಯೋಗ್ಯವಿರಲಿಲ್ಲ. ನನ್ನ ತಂದೆ, ಉಷೆಯನ್ನು ಹೊರಹಾಕಿ ಮಹಪರಾಧ ಮಾಡಿದನೆಂದು ಭಾವಿಸಿದ್ದೆ. ಅದಕ್ಕಾಗಿ ಆ ತಪ್ಪನ್ನು ತಿದ್ದಿಕೊಳ್ಳಬೇಕೆಂದೂ ಯತ್ನಿಸಿದ್ದೆ. ಅದಕ್ಕಾಗಿ ಅಕ್ಕನನ್ನು ಕರೆತಂದುದೇನೋ ನಿಜ. ಆದರೆ ಒಂದು ತಪ್ಪನ್ನು ತಿದ್ದಲು ಹೋಗಿ ಅನೇಕ ತಪ್ಪುಗಳನ್ನು ಮಾಡಬೇಕಾಯಿತು."

ಪಾಪ! ಅವಿನಾಶ ಇದಕ್ಕೇನು ಉತ್ತರಕೊಡಬಲ್ಲ! ಆತ ಸುಮ್ಮನೇ ಉಳಿದ. ಅಷ್ಟರಲ್ಲಿ ಬಾಗಿಲನ್ನು ನೂಕಿ ಕ್ಷೇತ್ರಮೋಹನನು ಒಳಹೊಕ್ಕ. ಶೈಲೇಶ ಆತನನ್ನು ನೋಡಿದ್ದೇನೋ ನಿಜ. ಆದರೆ ಬಾಯಿ ಬಂದು ಮಾಡಲು ಶಕ್ಯವಾಗಲಿಲ್ಲ. ಒಮ್ಮೆ ಕಠೋರರಾಗುವುದೇ ತಡ; ಆ ಕಾಠಿಣ್ಯ ಅವರನ್ನು ಇನ್ನೂ ಕಠೋರರನ್ನಾಗಿ ಮಾಡುತ್ತಿದೆ. ಉಷೆಯು ಮರೆಗೆ ನಿಂತಿದ್ದಳು.

ಶೈಲೇಶನೇ ಮುಂದುವರಿಸಿದ. "ನಾನು ನಿನ್ನ ಅಕ್ಕನೊಡನೆ ಒಮ್ಮೆ ಮದುವೆಯಾದುದು ನಿಜ. ಆದರೆ ಅಷ್ಟರಿಂದಲೇ ಆಕೆ ಸಹಧರ್ಮಿಣಿಯೆಂದು ಹೇಳಲು ಬಾರದು. ನಮ್ಮಿಬ್ಬರ ಶಿಕ್ಷಣ, ಧರ್ಮ ಯಾವುದರಲ್ಲೂ ಸಮಾನತೆ ಇಲ್ಲ. ಆಕೆಯನ್ನು ಇಲ್ಲಿ ಇಟ್ಟುಕೊಂಡೆನೆಂದು ತಿಳಿಯೋಣ. ಈ ಮನೆಯೆಲ್ಲ ಸ್ಮೃತಿ-ಶಾಸ್ತ್ರದ ಪಾಠಶಾಲೆಯಾದೀತು ನನ್ನ ಇದ್ದೊಬ್ಬ ಮಗ ಕುಸಂಸ್ಕಾರ ಗಳನ್ನೆಲ್ಲ ಕಲಿತುಕೊಳ್ಳಬೇಕಾದೀತು. ನನ್ನ ಇದ್ದೊಬ್ಬ ತಂಗಿಗೂ ತಂದೆಯ ಬಾಗಿಲು ಬಂದಾದೀತು. ಇದನ್ನೆಲ್ಲ ನಾನಾಗಿಯೇ ಹೇಳುವುದು ಹೇಗೆಂದು ತೊಂದರೆಯಲ್ಲಿದ್ದೆ. ಆಕೆ ತಾನೇ ಹೋಗುವೆನೆಂದು ಹೇಳಿ ನನ್ನನ್ನು ಈ ಕಷ್ಟದಿಂದ ಪಾರುಮಾಡಿದುದಕ್ಕಾಗಿ ಕೃತಜ್ಞನಾಗಿರುವೆ."

ಇಂತಹ ಉದ್ಧಟ ಮಾತುಗಳನ್ನು ಕೇಳಿ ಕ್ಷೇತ್ರಮೋಹನನು ಮೂಗಿನ ಮೇಲೆ ಬೆರಳಿಟ್ಟು ಆತನನ್ನೇ ದಿಟ್ಟಿಸುತ್ತ ನಿಂತ. ಶೈಲೇಶ ದುರ್ಬಲ ಸ್ವಭಾವದವ, ಲಜ್ಜಾಶೀಲ ವ್ಯಕ್ತಿ. ಕಠೋರವಾದ ಯಾವುದೇ ಮಾತಾಡು ವದು ಆತನಿಂದ ಶಕ್ಯವಿರಲಿಲ್ಲ ಇಂತಹ ಪ್ರಾಣಿ ಇದೇನು ರಂಬಾಟ ನಡೆಸಿ ದ್ದಾನೆಂದು ಕ್ಷೇತ್ರಮೋಹನನಿಗೆ ಬಗೆಹರಿಯಲಿಲ್ಲ. ಆದರೆ ಉಷೆಯನ್ನು ಕರೆ ಯಲು ಆಕೆಯ ತಮ್ಮ ಬಂದಿದ್ದಾನೆಂದು ಕೇಳಿದ್ದ. ಅಲ್ಲದೆ ಅಲ್ಲಿರುವ ಅಪರಿ ಚಿತ ವ್ಯಕ್ತಿಯು ಆತನೇ ಆಗಿರಬೇಕೆಂದು ತಿಳಿದಿದ್ದ. ಆತನ ಎದುರಿಗೇ ಶೈಲೇಶನು ಈ ರೀತಿ ಬಾಯಿ ಹರಿಬಿಟ್ಟಿದ್ದನ್ನು ನೋಡಿ ಆತನಿಗೆ ಇನ್ನಷ್ಟು ದುಃಖವಾಯಿತು. ಕೊನೆಗೆ ಆತನಿಂದ ತಡೆಯಲಾಗಲಿಲ್ಲ. "ಈ ಮಾತ ನ್ನೊಂದು ನಿನ್ನ ಅಕ್ಕನ ಕಿವಿಗೆ ಬೀಳುವಂತೆ ಮಾಡಬೇಡ. ಇದೇ ನನ್ನ ವಿನಂತಿ" ಎಂದು ಆ ಅಪರಿಚಿತ ವ್ಯಕ್ತಿಯೊಡನೆ ಬೇಡಿಕೊಂಡ.

"ನಾನು ಹೇಳುವದೇನೂ ಬೇಕಾಗಲಿಕ್ಕಿಲ್ಲ; ಆಕೆ ಬಾಗಿಲ ಬಳಿಯಲ್ಲೇ ಇದ್ದಾಳೆ."

"ಆ, ಹೊರಗೆ ನಿಂತಿರುವಳೇ? ಇಲ್ಲಿಯೇ? ಹೊರಗೆ?"

"ಹೌದು ಕ್ಷೇತ್ರಮೋಹನ, ನಾನು ಅದನ್ನು ಬಲ್ಲೆ" ಎಂದು ಶೈಲೇಶನೇ ಉತ್ತರಕೊಟ್ಟ.

ಇದನ್ನು ಕೇಳಿ ಕ್ಷೇತ್ರಮೋಹನ ತಣ್ಣಗಾದ. ಮೋರೆಯೊಣಗಿಸಿ ಕುಳಿತುಕೊಂಡ.

ಆ ದಿನ ಸಾಯಂಕಾಲ ಎರಡೂವರೆ ಘಂಟೆಗೆ ಅಕ್ಕನನ್ನು ಕರೆದು ಕೊಂಡು ಅವಿನಾಶ ಸ್ಟೇಶನ್ನಿನತ್ತ ಹೊರಟ. ಆಗ, ಸೋಮೇಂದ್ರ ಅತ್ತೆಯ ಜೊತೆಗಿದ್ದ–ಆತನ ತಂದೆ ಕಾಲೇಜಿನಲ್ಲಿದ್ದ–ಕ್ಷೇತ್ರಮೋಹನ ಹ್ಯಾಕೋರ್ಟಿನ ಬಾರ್‌ರೂಮಿನಲ್ಲಿದ್ದ.

ಮಾರನೇ ದಿನ ಚಹಾ ಕುಡಿಯುತ್ತಿರುವಾಗ ವಿಭೆಯು ತನ್ನ ಪತಿಯೆಡೆಗೆ ಕಟಾಕ್ಷವನ್ನು ಬೀರಿ "ಅಣ್ಣನೇನು ಮಾಡುತ್ತಾನೆ? ನಿಮಗೇನಾದರೂ ಗೊತ್ತೇ?" ಎಂದಳು.

"ನೋಡಬೇಕು? ಆತನ ಕೈಯ್ಯಲ್ಲೊಂದು ಪುಸ್ತಕವಿದೆ. ಆದರೆ ಆತ ಪಶ್ಚಾತ್ತಾಪ ಪಡುತ್ತಿರಬಹುದು."

"ನೀವು ಈ ಕೆಲಸ ಎಂದು ಮಾಡುವಿರಿ?"

"ಯಾವುದು? ಪುಸ್ತಕ ಹಿಡಿಯುವದೋ? ಪಶ್ಚಾತ್ತಾಪ ಪಡುವದೊ?"

"ಪುಸ್ತಕ ಹಿಡಿಯುವದು ನಿಮಗೆ ಶೋಭಿಸದು. ನಾನು ಹೇಳುತ್ತಿರುವುದು ಇನ್ನೊಂದರ ಬಗ್ಗೆ.

"ನೀನೂ ನಿನ್ನಣ್ಣನನ್ನು ಕರೆಸಿ ತಂದೆಯ ಮನೆಗೆ ಹೊರಟುಹೋದರೆ ನಾನು ಆ ಕೆಲಸ ಮಾಡುವೆ."

ವಿಭೆಯು ಉಲ್ಲಾಸದಲ್ಲಿದ್ದುದರಿಂದ ಕೋಪಿಸಲಿಲ್ಲ. "ಆ ಕೆಲಸವಂತೂ ನನ್ನಿಂದಾಗದು. ನಾನೇನು ಗೊಡ್ಡುರೂಢಿಗಳ ದಾಸಿಯಲ್ಲ; ಜಪತಪ, ಮಡಿಮೈಲಿಗೆ ಇವುಗಳ ಗೋಜಿಗೆ ಹೋಗುವವಳಲ್ಲ."

"ಇಂತಹ ಸೌಭಾಗ್ಯ ನಿನಗೆ ಸಿಗದಿದ್ದುದು ನಿನ್ನ ದುರ್ದೈವ" ಎಂದು ಕ್ಷೇತ್ರಮೋಹನ ಕೋಣೆಯ ಹೊರಗಾದ.

## ೧೪

ಶೈಲೇಶನ ಮದುವೆಯ ಪ್ರಸ್ತಾಪ—ಅದೇ ಭವಾನೀಪುರದ ಕಲಿತ ಕನ್ಯೆಯೊಡನೆ ನಡೆಯಹತ್ತಿತು. ಗಂಡನ ಮನಸ್ಸಿಗೆ ಬೇಸರವಾದೀತೆಂದು ಭಾವಿಸಿಯೋ—ಏನೋ, ವಿಭಾಳು ಈ ಕಾರ್ಯದಲ್ಲಿ ಬಹಿರಂಗವಾಗಿ ಸಹ

ಕರಿಸಲಿಲ್ಲ. ಆದರೆ ತನಗಿದ್ದ ಸಹಾನುಭೂತಿಯನ್ನು ವ್ಯಕ್ತಪಡಿಸಲು ಹಿಂದೆ ಗೆಯಲಿಲ್ಲ. ಒಮ್ಮೆ ಕನ್ಯಾಪಕ್ಷದವರ ಸಲಹೆಯಂತೆ ಕ್ಷೇತ್ರಮೋಹನನು ಶೈಲೇಶನಿಗೆ ಕೇಳಿದಾಗ ಶೈಲೇಶನು "ಜೀವನದ ಬಹಳಷ್ಟು ಭಾಗ ಸಂದಾಯ ವಾಯಿತು. ಈಗ ಉಳಿದ ಕೆಲದಿನಕ್ಕಾಗಿ ಹೊಸದೊಂದು ತೊಂದರೆಯನ್ನು ಕಲ್ಪಿಸಿಕೊಳ್ಳಲು ನನ್ನ ಮನಸ್ಸು ಸಿದ್ಧವಿಲ್ಲ. ಸೋಮೇಂದ್ರ ಹೇಗೂ ಇದ್ದಾನೆ. ನಿಮ್ಮೆಲ್ಲರ ಆಶೀರ್ವಾದದಿಂದ ಬಾಳಿ ಬೆಳಗಲಿ. ಈ ತೊಂದರೆ ಗಳನ್ನು ಗಂಟುಹಾಕಿಕೊಳ್ಳಲು ಮನಸ್ಸು ಒಡಂಬಡುವದಿಲ್ಲ" ಎಂದಿದ್ದ.

ಮನುಷ್ಯ ಸರಳನೋ ಕಪಟಿಯೋ ಎಂದು ತಿಳಿಯಲು ಹೆಚ್ಚು ಕಾಲ ಹಿಡಿಯುವದಿಲ್ಲ. ಶೈಲೇಶನ ಈ ಮಾತು ಕೇಳಿ ಕ್ಷೇತ್ರಮೋಹನನಿಗೆ ವೇದನೆ ಯಾಯಿತು. ಅಂದಿನಿಂದ ದಿನಾಲು ಕಚೇರಿಯಿಂದ ಹೊರಬಿದ್ದೊಡನೆಯೇ ಅವನಲ್ಲಿಗೆ ಹೋಗತೊಡಗಿದ. ಮನೆಯಲ್ಲಿ ಗೃಹಿಣಿ ಇರಲಿಲ್ಲ. ಮಕ್ಕಳಿರಲಿಲ್ಲ; ಮನೆಯಲ್ಲಿ ಮೊದಲಿನ ನಲಿವು ಚಲುವುಗಳಿರಲಿಲ್ಲ; ಬಿಟ್ಟ ಮನೆಯಂತೆ ತೋರುತ್ತಿತ್ತು. ಕೆಲ ನೌಕರರೇ ಕೂಡಿ ವ್ಯವಸ್ಥೆ ನೋಡುತ್ತಿದ್ದರು. ಸುಮಾರು ಒಂದು ತಿಂಗಳು ಕಳೆದ ಮೇಲೆ ಕ್ಷೇತ್ರಮೋಹನನೇ ಆ ಮಾತು ತೆಗೆದ.

"ಶೈಲೇಶ, ತನ್ನವರೆನ್ನುವವರು ಯಾರಾದರೂ ಇದ್ದ ಹೊರತು ಮನೆ ನಡೆಯಲಾರದು. ವೃದ್ಧಾಪ್ಯದಲ್ಲಂತೂ........"

ಅಂದು ಉಮೆಯೂ ಜೊತೆಗಿದ್ದಳು. "ಈಗೆಲ್ಲಿಯ ಮುಪ್ಪು ಅಣ್ಣಾ, ಅತ್ತಿಗೆಯೂ ಮೊದಲೇ ಬರಬಹುದು. ಗಂಡನ ಸಿಟ್ಟಿನಿಂದ ಅಪ್ಪನ ಮನೆ ಯಲ್ಲೆಷ್ಟು ದಿನ ಹೆಂಡತಿ ಉಳಿದಾಳು?" ಎಂದಳು. ಆದರೆ ಅವರಲ್ಲಾರೂ ಉತ್ತರ ಕೊಡಲಿಲ್ಲ. ಆದರೆ ಶೈಲೇಶನ ಮುಖ ಇನ್ನಷ್ಟು ಬಾಡಿತು. "ಇಲ್ಲ; ಉಮೆ, ಆಕೆ ಇನ್ನೆಂದೂ ಬಾರಳು" ಎಂದು ಕೆಲಹೊತ್ತಿನ ನಂತರ ಹೇಳಿದನು.

"ಬಾರದೇನು ಮಾಡಿಯಾಳು? ಇದೇ ತಿಂಗಳಲ್ಲಿ ಬಂದರೂ ಬರ ಬಹುದು? ನನಗೇಕೋ ಹಾಗೆನಿಸುತ್ತಿದೆ."

ಉಷೆಯು ತಿರುಗಿ ಬರುವದೆಷ್ಟು ಕಷ್ಟಸಾಧ್ಯವೆಂದು ಅಣ್ಣನಿಗೆ ಗೊತ್ತಿತ್ತು. ಶೈಲೇಶನ ಪ್ರತಿಯೊಂದು ಮಾತೂ ಆತನ ಮನದಲ್ಲಿ ನಟ್ಟಿತ್ತು.

ಉಷೆಯು, ಈ ಘಟನೆಗಳನ್ನೆಂದೂ ಮರೆಯಲಿಕ್ಕಿಲ್ಲವೆಂದೇ ಆತನ ತಿಳುವಳಿಕೆ. 'ಮೊದಲೇ ಶೈಲೇಶನ ತಂದೆ ಆಕೆಯ ಅಪಮಾನಮಾಡಿದ್ದ. ಬಂದು ಕಾಲಿಟ್ಟಳೋ ಎನ್ನುವಷ್ಟರಲ್ಲಿ ವಿಭಾಳು ಅಪಮಾನ ಪಡಿಸಿದಳು. ಶೈಲೇಶನೂ ಆದರಲ್ಲಿ ಹಿಂದೆ ಮುಂದೆ ನೋಡಲಿಲ್ಲ. ಹೋಗುವಾಗ ಅದೆಷ್ಟು ಅಪಮಾನಜನಕ ಮಾತನ್ನಾಡಿಲ್ಲ!" ಎಂದು ಯೋಚಿಸಿದ. ಆದರೂ ಬಾಲ್ಯದಿಂದಲೂ ಹಿಂದೂ ಸಂಸ್ಕೃತಿಯಲ್ಲಿ ಬೆಳೆದ ಹುಡುಗಿ ಒಮ್ಮೆಲೆ ಗಂಡನ ಮನೆಯನ್ನು ತಿರುಗಿ ಸೇರಲಿಕ್ಕಿಲ್ಲವೆಂದು ಹೇಳಲು ಧೈರ್ಯವಾಗಲಿಲ್ಲ. ಆಕೆ ಎಷ್ಟೋ ಅಪಮಾನಗಳನ್ನು ನುಂಗಿದ್ದಳು. ಧರ್ಮದ ವಿಷಯ ಅಡ್ಡಬಂದುದರಿಂದ ಆಕೆಗೆ ಸಹಿಸಲಾಗಲಿಲ್ಲ. ಎಷ್ಟೋ ವರ್ಷಗಳ ನಂತರ ಗಂಡ ಕರೆದಾಗಲೂ ಯಾವ ಅಭಿಮಾನ, ತಾತ್ಸಾರಗಳನ್ನು ತಳೆಯದೆ ಬಂದಿದ್ದಳು. ಹಿಂದೆ ಮುಂದೆ ನೋಡದೆ ಇಲ್ಲದ ಸಲ್ಲದ ವಿಚಾರಗಳಲ್ಲಿ ಮುಳುಗೇಳದೆ ಗಂಡನ ಅಪ್ಪಣೆ ಶಿರೋಧಾರ್ಯವೆಂದು ಭಾವಿಸಿ ಬಂದಿದ್ದಳು.

ಕ್ಷೇತ್ರಮೋಹನನಾದರೂ ರೂಢಿಯ ಮೌಢ್ಯದಲ್ಲಿ ಮುಳುಗಿದ ಮನುಷ್ಯನಲ್ಲ. ಬೆಳಕು ಎಲ್ಲಿಂದ ಬಂದರೂ ಸಂಗ್ರಹಿಸಬೇಕೆಂಬ ಮನೋವೃತ್ತಿ ಆತನದು. ಹೊಸತರಲ್ಲಿಯ ಒಳಿತನ್ನು ತೆಗಳುವ ಸ್ವಭಾವದವನಲ್ಲ. ಅದರಿಂದ ಹಿಂದೂ ನಾರಿಯರ ಧರ್ಮಾಚರಣೆಯ ರೀತಿ ಆತನಿಗೆ ಹೊಸತು. ಉಷೆಯ ಗೃಹವ್ಯವಸ್ಥೆಯ ಜೊತೆಗೆ ತನ್ನದನ್ನು ಹೋಲಿಸಿದ. ಸುಧಾರಿಸಿದವರೆಂದು ಜಂಭಕೊಚ್ಚುವವರಲ್ಲಿ ಸಾಕಷ್ಟು ಅಂತರ್ಯದ ಶಕ್ತಿ ಇಲ್ಲವೆಂದು ತಿಳಿದ. ಉಷೆಯಲ್ಲಿರುವ ಸಹಿಷ್ಣುತೆ ವಿಭಾಳಲ್ಲಿ ಎಲ್ಲಿದೆ? ಉಮೆಯಲ್ಲಿ ಎಲ್ಲಿದೆ? ಅಥವಾ ನಮ್ಮ ಸಮಾಜದ ಸಭ್ಯಸ್ತ್ರೀಯರಲ್ಲಿ ಎಲ್ಲಿದೆ? ಇವನ್ನೆಲ್ಲ ನೆನಸಿ ಸಂಕೋಚ ಹಾಗೂ ಭಕ್ತಿಶ್ರದ್ಧೆಗಳಿಂದ ಆತನ ಹೃದಯ ತುಂಬಿ ಬಂದಿತು. ಆಕೆ ಈ ದಿನಗಳಲ್ಲಿ ತನ್ನ ಗಂಡನಲ್ಲೆಷ್ಟು ಪ್ರೀತಿಸುತ್ತಿದ್ದಾಳೆಂಬುದನ್ನು ಆತ ಅರಿತಿದ್ದ. ಕೇವಲ ಮುಸಲ್ಮಾನ ನೌಕರನೊಬ್ಬನ ಸಲುವಾಗಿ ಈ ಪ್ರೇಮ ಶ್ರದ್ಧೆಗಳಿಗೆ ತಿಲಾಂಜಲಿ ಕೊಡಬೇಕಾಗಿ ಬಂದಿತಲ್ಲಾ ಎಂದು ಸಂತಾಪವಾಯಿತು."

"ಅಣ್ಣಾ? ಇನ್ನೂ ಏಕೆ ಮಾತಾಡಲೊಲ್ಲೆ?"

"ಅಂ? ಏನು? ಏನೆಂದೆ?"

“ ಅತ್ತಿಗೆ ಇದೇ ತಿಂಗಳಲ್ಲಿ ಬರಬಹುದೆಂದೆನಿಸುತ್ತದೆ. ನಿನ್ನ ಅಭಿಪ್ರಾಯವೇನು ? ”

“ ಆಕೆ ಬರುವದಿಲ್ಲವೆಂದೇ ಭಾವಿಸೋಣ. ಇಲ್ಲಿ ಬಂದಿದ್ದರೂ ಆಕೆಯ ಜೀವನ ನಡೆಯುಬಹುವಲ್ಲವೇ ? ಎಷ್ಟೋ ದಿನ ನಡೆದಿದೆ. ಈ ಕೆಲವು ದಿನಗಳಲ್ಲೇನಾಗಬೇಕಾಗಿದೆ ? ಆಕೆ ಬಾರದೆ ನಡೆಯದೇ ? ಅದಕ್ಕಾಗಿ ಬೇರೊಂದು ಉಪಾಯವನ್ನು ಶೋಧಿಸಬೇಕಾಗಿದೆ ”

ಉಮೆಗೆ ಅದರ ಅರ್ಥವಾಗಲಿಲ್ಲ. ಅದಕ್ಕಾಗಿ ಸುಮ್ಮನೇ ನೋಡುತ್ತ ಕುಳಿತಳು.

“ ಉಮೆ, ಆಕೆ ತಿರುಗಿ ಬರುವುದು ನನಗಷ್ಟು ಉಚಿತವೆಂದೆನಿಸುವದಿಲ್ಲ. ಆಕೆ ನನ್ನನ್ನು ಮದುವೆಯಾದುದೇನೋ ನಿಜ. ಆದರೆ ಆಕೆ ನನ್ನ ಸಹಧರ್ಮಿಣಿಯಲ್ಲ. ”

ಇದನ್ನು ಕೇಳಿ ಕ್ಷೇತ್ರಮೋಹನನಿಗೆ ಬೇಸರವೆನಿಸಿತು. “ ಶೈಲೇಶ, ನಮ್ಮಲ್ಲಿ ಧರ್ಮವೇ ಇಲ್ಲದಿರುವಾಗ ಸಹಧರ್ಮಿಣಿಯೆಲ್ಲಿಂದ ಬಂತು ? ಅಂತಹ ಆಗದಹೋಗದ ಧರ್ಮದ ಮಾತು ತೆಗೆಯಬೇಡ. ಮನೆಯ ವ್ಯವಸ್ಥೆಯಾದರೂ ಆಗಬಹುದಾದ ಧರ್ಮಸೂತ್ರವೊಂದನ್ನು ಸೂಚಿಸಲೇ?”

“ ನಿನ್ನ, ನಮಗೆ ಧರ್ಮವಿಲ್ಲವೆನ್ನುವೆಯೊ ? ”

“ ಧರ್ಮವಿದ್ದುದಾದರೆ ತುಸು ತೋರಿಸಲ್ಲ ? ಹೊಟ್ಟೆ ಪಾಡಿಗಾಗಿ ಉದ್ಯೋಗ ಮಾಡುತ್ತೇವೆ; ಉಣ್ಣುತ್ತೇವೆ; ಮಲಗುತ್ತೇವೆ. ಮುಗಿಯಿತು, ಸಹಧರ್ಮಿಣಿ ಇಲ್ಲದಿದ್ದರೂ ನಮ್ಮ ಈ ಕೆಲಸ ನಡೆಯುತ್ತಿದೆ. ಹಿಂದಿನ ಜನ ಯಜ್ಞಮಾಡುತ್ತಿದ್ದರು, ಜಪ-ತಪ, ಪೂಜೆ-ಪುರಸ್ಕಾರ ನಡೆಸುತ್ತಿದ್ದರು. ಧರ್ಮಕಾರ್ಯದಲ್ಲಿಯೇ ಮುಳುಗೇಳುತ್ತಿದ್ದರು. ಅಂತಹರಿಗೆ ಸಹಧರ್ಮಿಣಿಯ ಆವಶ್ಯಕತೆ ಇರುತ್ತಿತ್ತು. ”

“ ಹಾಗಾದರೆ ಸಹಧರ್ಮಿಣಿಯ ಅರ್ಥವೆಂದರೆ ಅಷ್ಟೇ ತಾನೇ ? ಯಾಗ-ಯಜ್ಞ, ಪೂಜೆ-ಪುರಸ್ಕಾರ. ”

“ ಅದೇ ಅರ್ಥ. ಅದರ ಹೊರತು ಇನ್ನಾವುದೂ ಇಲ್ಲ. ನೀನೂ ಹಿಂದೂ ಇರುವೆ. ನಾನೂ ಹಿಂದೂ ಇದ್ದೇನೆ. ಪೂಜೆಯೂ ಇಲ್ಲ;

ದೇವಸ್ಥಾನಕ್ಕೂ ಹೋಗುವದಿಲ್ಲ ವಿಷ್ಣು ರಾಮ ಇತ್ಯಾದಿಯರ ಗದ್ದಲದಲ್ಲಿ ಬಿದ್ದು ಅವರ ಭಜನಮಾಡುವ ಕಷ್ಟವೂ ನಮಗಿಲ್ಲ. ನಮ್ಮ ಸ್ತ್ರೀಯರಂತೂ ಪಾಪ! Harmless. ನಮಗಂತೂ ಇನ್ನೊಬ್ಬರ ತಂಟೆ ತಕರಾರಿಲ್ಲ. ಯಾರ ಗೋಜಿಗೂ ಹೋಗದ ಸಭ್ಯರು ನಾವು, ಶೈಲೇಶ, ಭವಾನೀಪುರದವ ರಂತೂ ನಮ್ಮ ಜೀವಾ ತಿನ್ನಹತ್ತಿದ್ದಾರೆ, ನಿನ್ನ ತಂಗಿಗೂ ಅಷ್ಟೇ ಇಚ್ಛೆಯಿದೆ, ಯಾರನ್ನೂ ನಿರಾಶೆಗೊಳಿಸಬೇಡ ಒಪ್ಪೋ."

"ಕ್ಷೇತ್ರಮೋಹನ, ಸುಮ್ಮನೆ ಪರಿಹಾಸ ಮಾಡುತ್ತೀಯಲ್ಲ" ಎಂದು ಶೈಲೇಶ ಎದ್ದ. ಆತನ ಮೋರೆ ನೋಡುವದು ಬೇಡವೆನಿಸುತ್ತಿತ್ತು.

"ಇಲ್ಲವಣ್ಣಾ ಇಲ್ಲ, ಶೈಲೇಶ. ನಾನು ನಿನ್ನ ಪರಿಹಾಸಮಾಡಬೇಕೆಂದಿಲ್ಲ. ನನ್ನ ನಿಜವಾದ ಅಭಿಪ್ರಾಯ, ಆದರ ಜೊತೆಗೆ ನನ್ನದೂ ಪರಿಹಾಸ ಮಾಡಿಕೊಂಡಂತೆಯೇ ಅಲ್ಲವೇ?"

ಶೈಲೇಶ ಮರುಮಾತಾಡಲಿಲ್ಲ. ಆತ ನಿಸ್ತಬ್ಧನಾಗಿ ನಿಂತುಬಿಟ್ಟ.

೧೩

ಈ ಮಾತು ಮುಂದುವರಿಸುವದು ಕ್ಷೇತ್ರಮೋಹನನಿಗೂ ಒಳಿತೆಂದು ತೋರಲಿಲ್ಲ. 'ಶೈಲೇಶನ ಕ್ರೋಧ ಉತ್ತೇಜನಗಳು ಇಳಿಯಲಿ; ಒಂದು ವಾರ ಬಿಟ್ಟು ನೋಡುವಾ. ಆ ಮೇಲೆ ಎಂದಾದರೂ ಬಂದು ಭವಾನೀಪುರದ ಮಾತು ತೆಗೆದರಾಯಿತು.' ಎಂದು ಯೋಚಿಸಿ ಉಮೆಯನ್ನು ಕರೆದುಕೊಂಡು ಹೊರಬಿದ್ದ. ಆದರೆ ಅದೇ ವಾರದಲ್ಲಿ ಇನ್ನೊಂದು ಹ್ಯಾಕೋರ್ಟಿನಲ್ಲಿ ಕೆಲಸ ಬಂದುದರಿಂದ ಕಲಕತ್ತೆ ಬಿಟ್ಟುಹೋಗಬೇಕಾಯಿತು. ಹೋಗುವಾಗ ವಿಭಾಳಿಗೆ 'ಶೈಲೇಶನ ಲಗ್ನವಾಗುವ ಆಸೆ ಕಂಡುಬರುತ್ತಿದೆ'ಯೆಂದು ಸಮಾಧಾನ ಹೇಳಿ ಹೋದ.

ಬಹಳ ದಿನದ ನಂತರ ಇಂದು ದಂಪತಿಗಳು ಮಾತಾಡತೊಡಗಿದ್ದಾರೆ. ಉಮೆಯಿಂದ ಹಲಕೆಲವು ಸುದ್ದಿಗಳನ್ನು ವಿಭೆಯು ಕೇಳಿಕೊಂಡಿದ್ದಳು.

"ನೀವು ಉಷೆಯ ಬಗ್ಗೆ ಆದರವುಳ್ಳವರೆಂದು ಕೇಳಿದ್ದೆ. ಆದರೆ ಅಣ್ಣನ ಲಗ್ನಕ್ಕೆ ಪ್ರಸ್ತಾವನೆ ಬರೆದವರೂ ನೀವೇ?"

“ ಒಂದು ತಿಂಗಳ ಹಿಂದೆ ನನಗೂ ಈ ಕಲ್ಪನೆ ಇದ್ದಿಲ್ಲ. ಈಗ ಹಾಗಾದರೆ ಒಳಿತಾದೀತೆಂದು ಭಾವಿಸಿದ್ದೇನೆ. ನಾನೀಗಲೂ ಉಷೆಯ ಹಿತಚಿಂತಕನೆಂಬುದು ನಿಜ. ಅಲ್ಲದೆ ಆಕೆ ಯಾವಾಗಲೂ ಸೌಖ್ಯವಾಗಿರಲೆಂದು ಹಾರೈಸುವೆ. ಆದುದರಿಂದ ಆಗದ-ಹೋಗದ ಮಾತಿಗಾಗಿ ತಲೆ ಹಾಳುಮಾಡಿಕೊಳ್ಳುವುದರಲ್ಲೇನು ಅರ್ಥವಿದೆ ? ”

“ ನೀವೇನು ಗಂಡಸರು ? ತಿಳಿಯುವದೇನು ಮಣ್ಣು ? ಬಂದ ದಿವಸವೇ ಆಕೆ ಇಷ್ಟುರವಳೇ ಎಂದು ಕಂಡುಹಿಡಿದೆ. ಈಗಲಾದರೂ ಗೊತ್ತಾಯಿತೇ ? ಅವಳೊಡನೆ ದಿನದೂಡುವುದು ನಮ್ಮಿಂದ ಸಾಧ್ಯವೇ ಇರಲಿಲ್ಲ. ”

“ ವಿಭಾ, ಈ ಮಾತನ್ನು ಕಣ್ಣಾರೆ ಕಂಡೆ. ಅದಕ್ಕಾಗಿಯೇ ಅವಳು ಓಡಿಹೋಗಬೇಕಾಯಿತು. ಅಲ್ಲದೆ ನಾವೆಲ್ಲ ಬೇರೆ ಬೇರೆ ದೃಷ್ಟಿಕೋಣಗಳಿಂದ ಆಕೆಯನ್ನು ಕಂಡಿದ್ದೇವೆ. ಕೆಲಮಟ್ಟಿಗೆ ನನ್ನ ಅಭಿಪ್ರಾಯವೂ ತಪ್ಪಾಗಿರಬಹುದು. ”

“ ಹೋಗಲಿ ಬಿಡಿ, ನೀವು ಹಾದಿಗೆ ಬಂದಿರೋ ಇಲ್ಲವೋ ? ಅಷ್ಟೇ ಸಾಕು. ಜಪ-ತಪ, ರೂಢಿ-ಮೌಢ್ಯಗಳನ್ನೇ ಪ್ರಶಂಸಿಸುತ್ತಿರುವ ನಿಮ್ಮನ್ನು ಕಂಡು ನನಗೂ ಹೆದರಿಕೆಯಾಗಿತ್ತು. ನಾವೇನು ಮುಸಲ್ಮಾನರಲ್ಲ. ಕ್ರಿಶ್ಚಿಯನ್ನರಲ್ಲ, ಅದಕ್ಕಾಗಿ ತಾವೇ ಮೇಲೆಂದು ಹೆಮ್ಮೆಪಡುವುದೇಕೆ ? ಹೆರರು ಮುಟ್ಟಿದ ಒಡವೆಯನ್ನೇಕೆ ತಿನ್ನಬಾರದು ? ಇವೆಲ್ಲ ಅವಳ ಮನೆಯಲ್ಲಿ ನಡೆಯಬೇಕೇ ಹೊರತು ಇಲ್ಲಿ ನಡೆಯಲಾರದು. ಏನು ಆ ಹಳೇ ವಿಚಾರ? ಏನು ಆ ಆಚಾರ !! ಅದಕ್ಕೇ ಗಂಡನ ಮನೆಯಿಂದ ಹೊರಬೀಳಬೇಕಾಯಿತು. ”

ಈ ಮಾತು ದಿಟವೂ ಇರಲಿಲ್ಲ. ಸಟೆಯೂ ಇರಲಿಲ್ಲ. ಸಟೆದಿಟಗಳ ಸಮ್ಮಿಶ್ರಣವದು. ಒಂದರಿಂದ ಇನ್ನೊಂದನ್ನು ಬೇರ್ಪಡಿಸುವುದು ಸಾಧ್ಯವಿರಲಿಲ್ಲ. ಅದಕ್ಕಾಗಿ ಕ್ಷೇತ್ರಮೋಹನ ಸುಮ್ಮನುಳಿದ.

ಅಷ್ಟರಲ್ಲಿ ಉಮೆ ಬಂದಳು. “ ಅಣ್ಣಾ, ಏನು ಸುದ್ದಿ ? ”

ವಿಭಾಳೇ ಮಾತು ಮುಂದರಿಸಿದಳು. “ ಅತ್ತಿಗೆಗೆ ತನ್ನ ಜಾತಿಯೊಂದೇ ಅಷ್ಟು ಪ್ರಾಧಾನ್ಯವಾಗಿರಬೇಕೇ ? ನನ್ನ ಸಲುವಾಗಿಯೇ ಅಣ್ಣ

ಆಕೆಯನ್ನು ಹೊರಗಟ್ಟಿದನೆಂಬ ನಿಮ್ಮ ದೂರನ್ನು ಸತ್ಯವೆಂದೇ ಒಮ್ಮೆ ಭಾವಿಸೋಣ. ಅಷ್ಟಕ್ಕಾಗಿ ನೀವೂ ಎಲ್ಲರ ಮುಂದೆ ನನ್ನನ್ನು ಅವಮಾನಿಸಿಲ್ಲವೇ? ನೀವು ಅವಮಾನಮಾಡಿದಿರೆಂದು ನಾನು ಒಮ್ಮೆಲೇ ಹೆತ್ತವರ ಮನೆಗೆ ಓಡಿಹೋಗಿದ್ದರೆ ನಿಮಗೇನನಿಸುತ್ತಿತ್ತು ?"

"ಅಲ್ಲ; ನನ್ನ ಅಭಿಪ್ರಾಯ ಹಾಗೇನಿಲ್ಲ!"

"ಹೌದು, ನೀವು ಹಾಗೆ ಹೇಳಲಾರಿರೆಂದು ಬಲ್ಲೆ" ಎಂದು ಉಮೆಯನ್ನು ಉದ್ದೇಶಿಸಿ "ನಿಮ್ಮಣ್ಣ ಹೊರಭಾಗವನ್ನಷ್ಟೇ ನೋಡಿ ಮೋಸ ಹೊಂದಿದ್ದರು. ಹಿಂದೂಧರ್ಮದಲ್ಲಿ ಪ್ರಚಾರದಲ್ಲಿರುವ ರೂಢಿಯ ಶಿಕ್ಷಣ ನಮಗೆ ದೊರಕಲಿಲ್ಲ. ತಾಯ್ತಂದೆಗಳಿಂದ ನಾವು ಸತ್ಯಶಿಕ್ಷಣ ಹೊಂದಿದ್ದೆವು. ಅವನ್ನೆಲ್ಲ ಬಿಟ್ಟು ನೀನು ಅತ್ತಿಗೆಯ ಹತ್ತಿರ ಹೋಗಿ ಕೊಂಚ ಕಲಿತು ಬರಬೇಕೆಂದು ನಿಮ್ಮಣ್ಣನವರ ಇಚ್ಛೆಯಿತ್ತು. ತಂಗೀ, ಏನೇನು ಕಲಿತೆ? ಇನ್ನೆಷ್ಟು ಕಲಿಯುವದಿದೆ? ಎಂಬುವದನ್ನೆಲ್ಲ ಚಾಚೂ ಬಿಡದೆ ಅಣ್ಣನಿಗೆ ನಿವೇದಿಸು." ಎಂದು ನಕ್ಕು ಹೊರಗೆ ಹೊರಟುಹೋದಳು.

ಕ್ಷೇತ್ರಮೋಹನ ಸುಮ್ಮನೇ ಕುಳಿತಿದ್ದ. ತಂಗಿಯ ಮುಂದೆ ಹೆಂಡತಿಯಾಡಿದ ಮಾತು ನೇರವಾಗಿ ಹೃದಯದಲ್ಲಿ ಚುಚ್ಚಿ ದುಃಖವಾಯಿತು. ಹಿಂದುಗಳ ಅನೇಕ ಆಚಾರಗಳು ಅವನಲ್ಲಿರಲಿಲ್ಲವಾದರೂ ಸ್ತ್ರೀಯರ ಶ್ರದ್ಧೆಯ ಬಗ್ಗೆ ಆತನಿಗೆ ಗೌರವವಿತ್ತು. ಆ ಗೌರವದ ಮೂಲಕವಾಗಿಯೇ ಉಷೆಯ ಆಚರಣೆಯನ್ನು ಕಂಡು ಆತನಿಗೆ ಹೆಮ್ಮೆಯೆನಿಸಿತ್ತು. ಈಗ ಅವಳ ಸಲುವಾಗಿ ತಲೆಕೆಳಗೆ ಹಾಕಬೇಕಾಯಿತು. 'ಆತ್ಮೀಯರಲ್ಲೆಲ್ಲ ಹಿಂದೂಧರ್ಮದ ಆದರ್ಶ ನೋಡುವದಾದರೆ, ಉಷೆ ಅವಳ ಅನುಕರಣವನ್ನು ಜನ ಮಾಡಿದಷ್ಟು ಕ್ಷೇಮ' ಎಂದಿದ್ದ. ಈಗ ಅವರೆಲ್ಲರ ಮುಂದೂ ಮಾತಾಡಲು ಮಾರ್ಗವಿರಲಿಲ್ಲ.

"ಉಷೆಯ ಕೃತಿ ವೈಯ್ಯಕ್ತಿಕ. ಆಕೆಯ ಹೊಣೆಗಾರಿಕೆ ಇನ್ನಾರ ಮೇಲೂ ಇಲ್ಲ ಆಕೆಯ ಕೃತಿಯಿಂದ ಯಾರಿಗೂ ಹಾನಿಯಾಗಿಲ್ಲ' ವೆಂದು ಹೇಳಿಬಿಟ್ಟರಾಯಿತೆಂದು ಒಮ್ಮೆ ಯೋಚಿಸಿದ. ಆದರೆ ಬಾಯಿಂದ ಮಾತೇ ಹೊರಡಲಿಲ್ಲ ಕೆಲಹೊತ್ತಿನ ಮೇಲೆ ತಂಗಿಗೆ "ರೂಢಿ ಕೆಟ್ಟದ್ದು. ಹಿಂದೂಧರ್ಮದಿಂದ ಈ ದೋಷ ಲೋಪ ಹೊಂದಲೇಬೇಕೆಂಬುದು ನಿಜ. ಆದರೆ

ಆ ರೂಢಿಯು ದಾಸರಿಗಿಂತ ಎಷ್ಟೋ ವಿಷಯಗಳಲ್ಲಿ ನಾವು ಕೀಳಾಗಿದ್ದೇವೆಂಬುದು ಮಾತ್ರ ಸುಳ್ಳಲ್ಲ!"

ಅಣ್ಣ ಅತ್ತಿಗೆಯರಲ್ಲಿ ಇಂತಹ ವಾದವಿವಾದ ಯಾವಾಗಲೂ ನಡೆಯುತ್ತಿದ್ದಿತು. ಆಗಲೂ ಆಕೆ ತನ್ನ ಅಭಿಪ್ರಾಯ ಪ್ರಕಟಿಸುತ್ತಿರಲಿಲ್ಲ. ಇಂದೂ ಹಾಗೆಯೇ ಮೌನವಾಗಿದ್ದಳು

ಅಂದೇ ರಾತ್ರಿ ತನ್ನ ಕೆಲಸಕ್ಕಾಗಿ ಆತ ಹೋಗಬೇಕಾಗಿತ್ತು. ಹೋಗುವ ಮುನ್ನ ಪ್ರಭಾಳನ್ನು ಕರೆದು "ನನಗೆ ತಿರುಗಿ ಬರಲು ೫-೬ ದಿನವಾದೀತು. ಅಷ್ಟರಲ್ಲಿ ಹೆಣ್ಣಿನ ಕಡೆಯವರಾರಾದರೂ ಸಿಕ್ಕರೆ ಶೈಲೇಶನ ವಿವಾಹವಾಗುವ ಆಸೆ ಇನ್ನೂ ಇದೆಯೆಂದು ತಿಳಿಸು" ಎಂದನು.

"ಹಾಗಾದರೆ ಅತ್ತಿಗೆ ಇನ್ನು ತಿರುಗಿ ಬರಲಾರಳು."

"ಇಲ್ಲ; ನಾನು ಯೋಚಿಸಿದಂತೆಲ್ಲ ಶೈಲೇಶನಿಗಿಂತ ಆಕೆಯ ಅಪರಾಧವೇ ಹೆಚ್ಚೆಂದು ನನಗನಿಸಹತ್ತಿದೆ. ನಿನ್ನ ಹೇಳಿಕೆ ನಿಜ. ಶಿಕ್ಷಣದಿಂದ ಸ್ವಾರ್ಥ, ಸಂಕುಚಿತ ಮನೋವೃತ್ತಿಗಳೇ ಬೆಳೆಯುವುದಾದರೆ ಅಂತಹ ಶಿಕ್ಷಣದಿಂದ ಪ್ರಯೋಜನವೇನು? ಅಂತಹ ಶಿಕ್ಷಣ ಹಿಂದಿನ ಕಾಲದಲ್ಲಿ ಮಾನ್ಯತೆ ಪಡೆದಿದ್ದರೂ ಪಡೆದಿರಬಹುದು. ಆದರೆ ಇಂದೆಂದೂ ನಡೆಯಲಾರದು. ನಮ್ಮಲ್ಲಿಯಂತೂ ಅದರ ಪ್ರಚಾರವಾಗಲಾರದು. ಉಷೆಯಲ್ಲಿ ಆಚಾರ ವಿಚಾರದ ವಿಡಂಬನೆಯಿತ್ತು. ತಥ್ಯವಿರಲಿಲ್ಲ; ತಥ್ಯವಿದ್ದುದಾದರೆ ಆಕೆಯೆಂದೂ ಮನೆಬಿಡುತ್ತಿರಲಿಲ್ಲ. ಒಳ್ಳೇದು" ಎಂದು ಕಾರಿನಲ್ಲಿ ಕುಳಿತ.

ದಾವೆಯ ತೀರ್ಮಾನವಾಗಿ ತಿರುಗಿ ಬರಲು ಹತ್ತು ದಿನ ಹತ್ತಿತು. ಮನೆಯಲ್ಲಿ ಕಾಲಿಟ್ಟೊಡನೆಯೇ ಉಮೆಯು ಕಣ್ಣಿಗೆ ಬಿದ್ದಳು. ಶೈಲೇಶನು ಆರು ತಿಂಗಳ ರಜೆಯ ಮೇಲೆ ಪುನಃ ಪ್ರಯಾಗಕ್ಕೆ ಹೋಗಿರುವನೆಂದು ಅವಳಿಂದ ತಿಳಿಯಿತು. ಆತ ಹೋಗಿ ಎರಡೇ ದಿನವಾಗಿತ್ತು. ಜೊತೆಗೆ ಮಗನ ಹೆಸರನ್ನು ತೆಗೆಯಿಸಿ ಕರೆದುಕೊಂಡು ಹೋಗಿದ್ದ.

"ಒಮ್ಮೆಂದೊಮ್ಮೆಲೇ ಇದೇನು ಮಾಡಿಬಿಟ್ಟ!"

"ಏನೋ ತಿಳಿಯದು! ಪ್ರಕೃತಿ ನೆಟ್ಟಗಿಲ್ಲವೆಂದರು. ಸೋಮೇಂದ್ರನನ್ನು ಕರೆದುಕೊಂಡು ಹೋಗಲು ಇಲ್ಲಿ ಬಂದಿದ್ದರು."

"ಪ್ರಕೃತಿಯೋ ಮನಸ್ಸೋ ಯಾರು ಬಲ್ಲ!" ಎಂದು ಉದ್ಗರಿಸಿದ.

## ೧೬

ಇತರ ಜೂನಿಯರ್ ಬ್ಯಾರಿಸ್ಟರರಂತೆಯೇ ಕ್ಷೇತ್ರಮೋಹನನ ದಿನಚರಿ ಸಾಗುತ್ತಿತ್ತು. ಕೈಯಲ್ಲಿ ಹಣವಿಲ್ಲದಿದ್ದಾಗ ಪ್ರಾಚೀನ ಹಿಂದುಗಳ Simple living; High thinking ವಾಸಿ ಎನ್ನುತ್ತಿದ್ದ ಹಣವಿದ್ದಾಗ ಆತನ ಕೈಹಿಡಿಯುವವರೇ ಇದ್ದಿಲ್ಲ ನಿಜವಾಗಿಯೂ ಆತ ಶೈಲೇಶನ ಹಿತಚಿಂತಕ ನಾಗಿದ್ದ. ಆತನ ಗುಣ ಅರಿತಿದ್ದ. ಅಂತಹ ದುರ್ಬಲ ಪ್ರಕೃತಿ ಮನುಷ್ಯ ರಿಂದ ಎಲ್ಲ ಕೆಲಸ ತೆಗೆದುಕೊಳ್ಳುವುದೂ ಸುಲಭ. ಆದಕ್ಕಾಗಿಯೇ ಭವಾನಿ ಪುರದ ನಂಟುತನ ಕೂಡಿಬರಬಹುದೆಂದು ಆತನಿಗೆ ಆಸೆಯಿತ್ತು. ಶೈಲೇಶ ಪಾಶ್ಚಾತ್ಯ ದೇಶಗಳನ್ನೊಮ್ಮೆ ಸುತ್ತಿಬಂದರೆ ಮದುವೆಗೆ ಒಪ್ಪಿಯೇ ತೀರುತ್ತಾ ನೆಂದು ಹೆಣ್ಣಿನ ಕಡೆಯವರಿಗೆ ಹೇಳಿದ್ದ. ಉಷೆಯ ಬಗ್ಗೆ ಮೊದಲಿನಂತೆಯೇ ಸ್ನೇಹವಿತ್ತು; ಶ್ರದ್ಧೆಯಿತ್ತು. ಆದರೆ ಆಕೆ ತಿರುಗಿ ಬರುವ ಆಸೆ ಇರಲಿಲ್ಲ. "ಆಕೆ ಎಲ್ಲಿಯೇ ಇರಲಿ. ಸುಖದಿಂದಿರಲಿ; ಸಮಾಧಾನವಾಗಿರಲಿ. ಆಕೆಯ ಧರ್ಮಶ್ರದ್ಧೆ ಉತ್ತರೋತ್ತರವಾಗಲಿ, ಏನೇ ಆದರೂ ಶೈಲೇಶನ ಗೃಹಕೃತ್ಯ ದಲ್ಲಿ ಮಾತ್ರ ಆಕೆಗೆ ಸ್ಥಾನವಿಲ್ಲ" ಎಂದುಕೊಳ್ಳುತ್ತಿದ್ದ.

ಆತ ಆಕೆಯ ಎಲ್ಲ ಕೃತಿಯನ್ನೂ ತನ್ನ ಮನದ ತಕ್ಕಡಿಯಲ್ಲಿ ತೂಗುತ್ತಿದ್ದ. "ಉಷೆಯು ಪತಿಯನ್ನು ಪ್ರೀತಿಸಲಿಲ್ಲ. ಅದು ಆಕೆಗೆ ಅಸಂಭವವಾಗಿರಬೇಕು. ಬಾಲ್ಯದಿಂದಲೇ ಕಠೋರ ಆಚಾರ ವಿಚಾರಗಳಲ್ಲಿ ಬೆಳೆದವಳು. ಅದರಿಂದ ಈ ಲೋಕದ ಚಿಂತೆಗಿಂತ ಪರಲೋಕದ ಚಿಂತೆಯೇ ಹೆಚ್ಚು. ಅದಕ್ಕಾಗಿಯೇ ಇಷ್ಟು ಸುಲಭವಾಗಿ ಗಂಡನನ್ನು ಬಿಟ್ಟುಹೋದಳು. ತನ್ನ ಕರ್ತವ್ಯವೆಂದು ಭಾವಿಸಿದ್ದುದರಿಂದಲೇ ಆಕೆ ಸೋಮೇಂದ್ರನನ್ನು ಅಷ್ಟು ಆತ್ಮೀಯತೆಯಿಂದ ನೋಡುತ್ತಿರಬೇಕು" ಎಂದು ಯೋಚಿಸುವ ನಿನ್ನೊಮ್ಮೆ.

ಹೀಗೆಯೇ ಎರಡು ತಿಂಗಳು ಉರುಳಿತು. ಅಷ್ಟರಲ್ಲಿ ಅನಿರೀಕ್ಷಿತವಾಗಿ ಪ್ರಯಾಗದಿಂದ ಒಂದು ಪತ್ರ ಬಂದಿತು. "ಶೈಲೇಶ ಒಬ್ಬ ವೈಷ್ಣವ ಸಾಧುವಿನಿಂದ ದೀಕ್ಷೆ ತೆಗೆದುಕೊಂಡಿದ್ದಾನೆ. ಮಗನಿಗೂ ವ್ರತ ಬಂಧ ಮಾಡಿಸಿದ್ದಾನೆ. ಪಿತಾಪುತ್ರರು ದಿನಾಲು ಗಂಗಾಸ್ನಾನ ಮಾಡು

ತ್ತಾರೆ. ವಿಾನ ಮಾಂಸ ತಿನ್ನುವದಿರಲಿ; ಕೊಳ್ಳುವವರ ಓಣಿಯಲ್ಲಿ ಸಹ ಕಾಲಿಕ್ಕುವದಿಲ್ಲ" ಎಂದು ಬರೆದಿತ್ತು.

"ಈ ಹುಚ್ಚಾಟ ನಡೆಸಿದವರಾರು? ಯೋಗೇಶಬಾಬುವೇ?" ಎಂದು ವಿಭಾಳು ಕೇಳಿದಳು.

"ಹೌದು. ಇದು ಯೋಗೇಶಬಾಬುವಿನಿಂದಲೇ ಬಂದಿರಬೇಕು. ಆದರೆ ನನ್ನೊಡನೆ ಕಣ್ಣುಮುಚ್ಚಾಲೆಯಾಡುವಷ್ಟು ಆತನ ಸಲಿಗೆ ಇಲ್ಲ."

"ಏನೇ ಆದರೂ ಆತ ನನ್ನಣ್ಣನ ಗೆಳೆಯ. ನಿಮ್ಮ ಹತ್ತಿರ ಸಲಿಗೆ ಯಿಂದ ವ್ಯವಹರಿಸಿದರೂ ತಪ್ಪೇನಿಲ್ಲ. ಆದರೆ ಆತ ಹೀಗೇಕೆ ಮಾಡಿರ ಬಹುದು. ಹುಂ, ಅಣ್ಣನಿಂದ ಅತ್ತಿಗೆಯ ಸುದ್ದಿಯನ್ನೆಲ್ಲ ಕೇಳಿ ತಿಳಿದಿರಬೇಕು. ಅಲ್ಲದೆ ನೀವೊಬ್ಬರೇ ಉಷೆಯ ಬಗ್ಗೆ ಸಹಾನುಭೂತಿಯುಳ್ಳವ ರೆಂದು ತಿಳಿದಿರಬೇಕು. ಆದಕ್ಕಾಗಿಯೇ ನಿಮಗೆ ಹೀಗೆ ಬರೆದಿರಬೇಕು." ಆ ಮೇಲೆ ಆಕೆಗೇಕೋ ನಗು ಬಂದಿತು.

"ಇನ್ನು ಮುಂದೆ ಯಾವುದಾದರೂ ಕೇಸು ಆರಂಭವಾಡುವದಿದ್ದಾಗ ನನ್ನಿಂದ ಬುದ್ಧಿಯನ್ನು ಎರವು ಪಡೆಯಿರಿ. ಅಂದರೆ ಈಗಿನಷ್ಟು ಅವಗುಣ ವಾಗಲಿಕ್ಕಿಲ್ಲ. ಉಮಾ, ಈ ಹೊತ್ತು ತುಸು ಬೇಗನೇ ಸಿದ್ಧಳಾಗು ನೋಡುವಾ. ಏಳು ಘಂಟೆಯೊಳಗಾಗಿ ಹೋಗಿ ಮುಟ್ಟದಿದ್ದರೆ ಲಾವಣ್ಯಳಿಗೆ ಸಿಟ್ಟು ಬಂದೀತು. ಅಲ್ಲ, ನಿನ್ನ ಅಣ್ಣನಿಗೆ ತುಸು ಬುದ್ಧಿ ಹೇಳಬಾರದೇ? ಅಂದರೆ ದುಡ್ಡು ಕೊಟ್ಟವರಾದರೂ ಸುಮ್ಮನೆ ಇರುವ ಕಾಲ ಬಂದೀತು."

ನಗನಗುತ್ತ ಉಮೆಯು ಹೊರಟುಹೋದಳು. ವಿಭೆಯು ಹೇಳಿದ ಕಾರಣ ಸರಿಯಿರಬಹುದೆಂದು ಆಕೆ ಊಹಿಸಿದ್ದಳು.

ಈ ಘಟನೆ ನಡೆದ ೫-೬ ದಿನದ ನಂತರ ಕ್ಷೇತ್ರಮೋಹನನು ದೊಡ್ಡ ದೊಂದು ಲಕೋಟೆಯನ್ನು ತಂದು ಹೆಂಡತಿಯ ಮುಂದೆ ಒಗೆದ. "ಇದನ್ನು ಬರೆದವನ ಯೋಗೇಶನ ತಂದೆ. ಆತ ೭೦-೭೫ ವರ್ಷ ವಯಸ್ಸಿನವ. ಅವನೂ ನನ್ನನ್ನು ಕಂಡುದಿಲ್ಲ. ನನಗೂ ನೋಡಿದ ನೆನಪಿಲ್ಲ. ಒಮ್ಮೊಮ್ಮೆ ನಮ್ಮಿಬ್ಬರ ನಡುವೆ ಪತ್ರವ್ಯವಹಾರವಾದುದುಂಟು. ಅವನೆಂತಹನೆಂದು ಗೊತ್ತಿರದಿದ್ದರೂ ನನ್ನೊಡನೆ ನಗೆಚಾಟಿಕೆ ನಡೆಸಲಾರ."

ಪತ್ರ ಬಹಳ ಉದ್ದವಿತ್ತು, ಅದು ಇಂಗ್ಲೀಷಿನಲ್ಲಿರದೆ ಮಾತೃಭಾಷೆ ಯಲ್ಲಿತ್ತು. ವಿಭಾಳು ಮೊದಲಿನಿಂದ ಕೊನೆಯ ವರೆಗೆ ಎರಡು ಬಾರಿ ಓದಿ,

ನಡೆದದ್ದಾದರೂ ಏನು? ನೀವೇ ಒಂದೆರಡು ದಿನದ ಮಟ್ಟಿಗೆ ಹೋಗಿ ಬರಬಾರದೇ?'' ಎಂದಳು

''ಆದರೆ ನನಗೆಲ್ಲಿ ಪುರಸೊತ್ತಿದೆ?"

''ಹೀಗೆಂದರೆ ಹೇಗೆ ನಡೆದೀತು? ಇಂತಹ ಸಂಕಟ ಕಾಲದಲ್ಲಿ ನಾವು ಅವನಿಗೆ ನೆರವಾಗದಿದ್ದರೆ ಇನ್ನಾರು ನೆರವಾಗಬೇಕು? ಇದರಲ್ಲಿ ಬರೆದುದರಲ್ಲಿ ಅರ್ಥವಾದರೂ ಸತ್ಯವಿದ್ದರೆ—ಪರಿಸ್ಥಿತಿಯು ಹದಗೆಟ್ಟಿದೆಯೆಂದು ನಿಸ್ಸಂದೇಹವಾಗಿ ಹೇಳಬಹುದು."

ಕ್ಷೇತ್ರಮೋಹನನು ಗೋಣಲ್ಲಾಡಿಸಿದ. ''ನಿನ್ನ ಮಾತೇನೋ ಸರಿ· ಆದರೆ ಹೇಗೆ ಹೋಗಲಿ? ಹೋದರಾದರೂ ಸರಿಯಾದೀತೆಂದು ನನಗನಿಸದಲ್ಲ!"

ಆ ಮೇಲೆ ಪತಿಪತ್ನಿಯರಿಬ್ಬರೂ ಎಷ್ಟೋ ಹೊತ್ತಿನ ತನಕ ಮೌನವಾಗಿದ್ದರು ಆ ಮೇಲೆ ಕ್ಷೇತ್ರಮೋಹನನೇ ಉದಾಸೀನನಾಗಿ ನುಡಿದ. ''ಶೈಲೇಶ ಮಾಡದೇ ಇದ್ದದ್ದು ಯಾವುದೂ ಇಲ್ಲ. ಆತನಲ್ಲಿ ಮಾನಸಿಕ ಸ್ಥಿರತೆಯೆಂಬುದು ಎಳ್ಳಷ್ಟೂ ಇಲ್ಲ ಅವನೆಲ್ಲಿಯಾದರೂ ಹಾಳಾಗಿ ಹೋಗಲೊಲ್ಲನೇಕೆ? ಆದರೆ ಸೋಮೇಂದ್ರನನ್ನೂ ಅದೇ ಹಾದಿಯಲ್ಲಿ ತಳ್ಳಬೇಕೆ?"

ವಿಭೆಯು ದುಃಖದಿಂದ ಕುಳಿತಿದ್ದಳು. ಆಕೆ ಅಳಬಲ್ಲಳು, ಅಭಿಮಾನ ಮಾಡಬಲ್ಲಳು; ಆದರೆ ತನ್ನನ್ನು ವಂಚಿಸಿಕೊಳ್ಳಲಾರಳು. ಆಕೆಗೆ ತನ್ನ ಈ ಗುಣಾವಗುಣಗಳ ಜ್ಞಾನವಿತ್ತು. ಕ್ಷೇತ್ರಮೋಹನ ಎಷ್ಟೋ ಹೊತ್ತಿನ ತನಕ ಮೌನವಾಗಿದ್ದ. ಆ ಮೇಲೆ ಹೆಂಡತಿಯನ್ನು ಕುರಿತು ''ವಿಭಾ ನಿನ್ನಣ್ಣನಿಗೆ ಉಷೆಯಲ್ಲಿ ನಿಜವಾಗಿಯೂ ಪ್ರೇಮವಿದ್ದಿರಬೇಕು. ಆತ ಸೋಮೇಂದ್ರನ ತಾಯಿಯನ್ನಾದರೂ ಈ ರೀತಿ ಪ್ರೀತಿಸಿದ್ದನೋ ಇಲ್ಲವೋ? ಅದರಿಂದಲೇ ಈ ರೀತಿಯಾಗಿರಬೇಕು" ಎಂದ.

ಆಕೆಗೆ ಸಿಟ್ಟು ಬಂದೀತು ''ನನ್ನಣ್ಣ ದುರ್ಬಲ ಮನಸ್ಸಿನವನೆಂದು ಹೀಗೆಲ್ಲ ಹೇಳಬೇಡಿ. ಆತನೆಂದೂ ಈ ರೀತಿ ಬೇರೊಬ್ಬರ ಆರಾಧನೆ ನಡಿಸಲಾರ.''

ಕೊನೆಗೆ ಹೆಂಡತಿಯ ಮಾತಿಗೆ ಕ್ಷೇತ್ರಮೋಹನ ಒಪ್ಪಿದ. ಎರಡು ದಿನದಲ್ಲಿಯೇ ಇನ್ನಿತರ ಕೆಲಸಗಳನ್ನೆಲ್ಲ ಬದಿಗೊತ್ತಿ ಪ್ರಯಾಗಕ್ಕೆ ಹೋಗಿ

ಬಂದ. ಅಲ್ಲಿ ನೋಡಿದ ಕತೆ ಹಾಸ್ಯಾಸ್ಪದವಾಗಿದ್ದಿತು. ಯೋಗೀಶನ ಮನೆಯ ಹತ್ತಿರವೇ ಶೈಲೇಶನಿದ್ದ. ಆದರೆ ಕ್ಷೇತ್ರಮೋಹನನಿಗೆ ಆತನ ಭೆಟ್ಟಿಯಾಗಲಿಲ್ಲ. ಶೈಲೇಶ ತನ್ನ ಗುರುಗಳ ಪರಿವಾರದ ಜೊತೆಗೆ ವೃಂದಾವನಕ್ಕೆ ಹೋಗಿದ್ದ. ಸೋಮೇಂದ್ರನ ರೂಪು ನೈಷ್ಠಿಕ ಬ್ರಹ್ಮಚಾರಿಯದಾಗಿತ್ತು. ಆತನಿಗೆ ಬೆಳಗು ಬೈಗುಗಳಲ್ಲಿ ಸನಾತನಿಯೊಬ್ಬನಿಂದ ಧರ್ಮೋಪದೇಶ ನಡೆದಿತ್ತು. ಆತನ ದೇಹ ಸೊರಗಿತ್ತು.

ಇದನ್ನೆಲ್ಲ ಕೇಳಿ ವಿಭೆಗೆ ದುಃಖ ಒತ್ತರಿಸಿ ಬಂದಿತು. ಅವನನ್ನು ಕರೆದುಕೊಂಡಾದರೂ ಬರಬಾರದಿತ್ತೇ?''

''ನನಗೂ ಆ ವಿಚಾರ ಬಂದಿತ್ತು. ಆದರೆ ಶೈಲೇಶನಿಗೆ ಇನ್ನೂ ಸಿಟ್ಟು ಬರಬಹುದೆಂದು ಬಿಟ್ಟೆ.''

''ನಾನೂ ನಿಮ್ಮೊಡನೆ ಬಂದಿದ್ದರೆ ನೆಟ್ಟಗಾಗುತ್ತಿತ್ತು?'' ಎಂದು ಉಸಿರ್ಗರೆದಳು.

## ೧೭

ಶೈಲೇಶನಿಂದ ಪತ್ರವ್ಯವಹಾರವಿಲ್ಲದಿದ್ದರೂ ಆತನ ಸುದ್ದಿಯು ಪ್ರಚಾರವಾಗಲು ತಡೆಯಾಗಲಿಲ್ಲ. ಒಂದೆರಡು ಕಡೆ ಅವನ ಕತೆಯಲ್ಲಿ ಉಪ್ಪುಕಾರ ಬೆರೆತು ರುಚಿಕಟ್ಟಾಗಿ ಪಸಾರ್ಟಿತ್ತು. ಭವಾನಿಪುರದವರಿಗೂ ಈ ಸುದ್ದಿ ಹೇಳಿ ಕಳಿಸುವ ಅವಶ್ಯಕತೆ ಇರಲಿಲ್ಲ. ವಿಭಾಳಿಗೆ ಎಲ್ಲಿಯೂ ಮೋರೆ ಎತ್ತಿ ತಿರುಗುವಂತಿರಲಿಲ್ಲ. ಗಂಡನ ಮುಂದೆ ಮಾತ್ರ ''ಅಣ್ಣನೊಮ್ಮೆ ತಿರುಗಿ ಬರಲಿ, ನನ್ನ ಮುಂದೆಲ್ಲ ಆಟ ನಡೆಯಲಿಕ್ಕಿಲ್ಲ'' ಎಂದು ಜಂಬಕೊಚ್ಚುತ್ತಿದ್ದಳು.

ಕ್ಷೇತ್ರಮೋಹನನಿಗೆ ಮಾತ್ರ ವಿಭಾಳೇ ವಿಜಯಶಾಲಿಯಾದಾಳೆಂಬ ಧೈರ್ಯವಿರಲಿಲ್ಲ. ಆದರೂ ನಮ್ಮ ಸಮಾಜದಲ್ಲಿ ಬಂದರೆ ಈ ವೇಷ ಬಹಳ ದಿನ ತಡೆಯಲಿಕ್ಕಿಲ್ಲವೆಂದು ಆತನಿಗನಿಸುತ್ತಿತ್ತು.

ಶೈಲೇಶ ಇನ್ನೂ ನಾಲ್ಕು ತಿಂಗಳು ರಜೆ ಬೆಳೆಸಿದ. ಈಗ ಅದರಲ್ಲಿಯೂ ಎರಡು ತಿಂಗಳು ಕಳೆದಿತ್ತು. ಅಲ್ಲಿದ್ದು ಬೇಕಷ್ಟು ಸ್ನಾನಮಾಡಲಿ, ತ್ರಿಪುಂಡ್ರ ಹಚ್ಚಲಿ; ನೌಕರಿ ಮಾತ್ರ ಬಿಡಲಿಕ್ಕಿಲ್ಲವೆಂದು ಕ್ಷೇತ್ರಮೋಹನ ನಂಬಿದ್ದ. ಅದಕ್ಕಾಗಿ ಶೈಲೇಶ ಬಂದಮೇಲೆ ನೋಡಿಕೊಂಡರಾಯಿತೆಂದು ದಿನಹರಣ ಮಾಡುತ್ತಿದ್ದ

ಒಮ್ಮೆ ಚಹಾಪಾನ ಮಾಡುತ್ತಿದ್ದ. "ಈಗ ಉಷೆಯು ಸಹಧರ್ಮಿಣಿಯಾದಂತಾಯಿತು ಶೈಲೇಂದ್ರ ಉಷೆಯರು ಜಗಳಾಡುವ ಪ್ರಸಂಗವೇನಿಲ್ಲ" ಎಂದು ಕ್ಷೇತ್ರಮೋಹನ ಮಾತಿಗೆ ಆರಂಭಿಸಿದ.

"ಆಕೆ ಬರುವ ಸುದ್ದಿಯೇನಾದರೂ ಇದೆಯೇ?"

"ಇಲ್ಲ."

"ಹಳ್ಳಿಗಳಲ್ಲೆಲ್ಲ ಮೋಡಿ ಮಾಡುತ್ತಾರಂತೆ. ಅದರಲ್ಲಿ ನಿಮಗೆ ವಿಶ್ವಾಸವಿದೆಯೇ?"

"ಉಹುಂ. ಇದ್ದರೂ ಅವುಗಳಿಂದ ಹೀಗೆಲ್ಲ ಮಾಡಲು ಬಾರದು?"

"ಯಾಕೆ?"

"ಅಕ್ಕನ ಬಗ್ಗೆ ಹಿಂದಿನ ಆದರವಿಲ್ಲದಿದ್ದರೂ ಇಂತಹ ಕುತ್ಸಿತ ಮಾರ್ಗಗಳನ್ನು ಆಕೆ ಅನುಸರಿಸುವಳೆಂದು ನನಗನಿಸದು."

"ಏನೇ ಆಗಲಿ. ಆ ಹುಡುಗನನ್ನು ಮಾತ್ರ ಅಲ್ಲಿಂದ ತರಲೇಬೇಕು" ಎಂದಳು.

ಅಷ್ಟರಲ್ಲಿ ಶೈಲೇಶನ ಮನೆಯ ಆಳು ಜಮಖಾನು ಬೇಡಲು ಬಂದ. ಅವನಿಂದ ಶೈಲೇಶನ ಜೊತೆಗೆ ಇನ್ನೂ ಮೂರು ನಾಲ್ಕು ಮಂದಿ ಸಾಧು ಸಂತರು ಬಂದಿದ್ದಾರೆಂದು ತಿಳಿಯಿತು. ಅವರಿಗೆ ಹಾಸಿಕೊಳ್ಳಲಿಕ್ಕೆ ಜಮಖಾನು ಬೇಕಾಗಿತ್ತು. ಆಳಿಗೆ ಜಮಖಾನು ಕೊಟ್ಟು ಕಳಿಸಿದರು. ಆ ದಿನ ತಡೆದು ಮಾರನೇ ದಿನ ಎಲ್ಲರೂ ಶೈಲೇಶನ ಮನೆಗೆ ಹೋದರು.

ಒಮ್ಮೆಲೇ ಶೈಲೇಶನ ಓದುವ ಕೋಣೆಯನ್ನು ಪ್ರವೇಶಿಸುವವರಿದ್ದರು. ಆದರೆ ಅಲ್ಲಿಯ ಭಾವಭಂಗಿಯನ್ನೆಲ್ಲ ನೋಡಿ ದಂಗಾಗಿ ನಿಂತರು. ಬಾಗಿಲಿಗೆ ಇಳಬಿಟ್ಟಿದ್ದ ಪರದೆ ಇರಲಿಲ್ಲ. ಒಂದು ಕಪಾಟಿದ್ದರೂ ಅದರಲ್ಲಿ ಯಾವ ವಸ್ತುವೂ ಇರಲಿಲ್ಲ. ನೆಲದ ಮೇಲೆ ಜಮಖಾನು ಹಾಸಿ ಇಬ್ಬರು ಕುಳಿತಿದ್ದರು. ಅವರ ಮೈತುಂಬ ಹರಿಮುದ್ರೆ. ಕುತ್ತಿಗೆಗೆಯಲ್ಲಿ ಗಡುತರ ಜಪಮಣಿ ಮಾಲೆ. ಹೊರಗೆ ಬಂದ ಆಗಂತುಕ ಸಾಹೇಬರನ್ನು ಕಂಡು ಆ ಸಾಧುಗಳಿಗೆ ದಿಗಿಲಾಯಿತು. ಬಂದವರು ಮೇಲೆ, ಮಾಳಿಗೆಗೆ ಹೋಗೋಣವೆಂದು ಮಾಡಿದ್ದರು. ಆದರೆ ಅಡಿಗೆಯವನು 'ಮೇಲಿನ ಕೋಣೆಯಲ್ಲಿ ಗುರುಗಳಿದ್ದಾರೆ'ಂದು ಅವರನ್ನು ತಡೆದನು.

" ಯಾರೋ ಗುರುಗಳು "

ಅಡಿಗೆಯವ ಉತ್ತರಕೊಡಲಿಲ್ಲ.

" ಸಾಹೇಬರೆಲ್ಲಿ?"

ಬೆರಳಿನಿಂದ ಮೇಲಕ್ಕೆ ತೋರಿಸಿದ. ಕ್ಷೇತ್ರಮೋಹನನು "ಶೈಲೇಶ, ಶೈಲೇಶ" ಎಂದು ಕೂಗಿದ. ಸೋಮೇಂದ್ರ ಓಡಿಬಂದ. ಆತನ ರೀತಿನೀತಿಯನ್ನು ಕಂಡು ವಿಭಾಳಿಗೆ ಅಳುಬಂದಿತು. ಬಿಳೀ ಧೋತರವುಟ್ಟಿದ್ದ. ಹಣೆಯಲ್ಲಿ ನಾಮ. ಕುತ್ತಿಗೆಯಲ್ಲಿ ಜಪಸರ. ಆತ ಹತ್ತಿರ ಬರದೆ ದೂರದಿಂದಲೇ ನಮಸ್ಕರಿಸಿದ. ಉಮೆಯು ಅವನನ್ನು ಹಿಡಿಯಲು ಬಯಸಿದಳು. ಆದರೆ ಅಣ್ಣ ಬೇಡವೆಂದದ್ದರಿಂದ ಸುಮ್ಮನಾದಳು. " ಸೋಮೇಂದ್ರ, ನಿನ್ನ ತಂದೆಯೆಲ್ಲಿ?" ಎಂದು ಕೇಳಿದ

"ಗುರುವಿನ ಬಳಿಯಲ್ಲಿ ಭಾಗವತ ಓದುತ್ತಿದ್ದಾರೆ."

"ಅವರಿಗೆ ನಾವು ಬಂದಿದ್ದೇವೆಂದು ಹೇಳು"

"ನೀವು ಬಂದುದು ಅವರಿಗೆ ಗೊತ್ತಿದೆ ಅವರು ಬರುವರು"

ಕೆಲಹೊತ್ತಿನಲ್ಲಿಯೇ ಪಾದುಕೆಗಳನ್ನು ಧರಿಸಿದ ಶೈಲೇಶ ಕೆಳಗಿಳಿದು ಬಂದ. ಸಾದಾ ಧೋತರ, ಶರ್ಟ್ ತೊಟ್ಟಿದ್ದ. ಮಿಸು ಚೆಂಡಿಕೆ ಬಿಟ್ಟಿದ್ದ. ಬಹಿರಂಗದಲ್ಲಾವ ಬದಲಾವಣೆ ಕಂಡುಬರದಿದ್ದರೂ ಅಂತರಂಗದಲ್ಲಿನ ಬದಲಾವಣೆ ಮಾತ್ರ ಆತನ ಚಹರೆಯಿಂದ ಒಡೆದು ಕಾಣುತ್ತಿತ್ತು. ವಿನಯಿಯಾಗಿದ್ದ; ಮಧುರಭಾಷಿಯಾಗಿದ್ದ. ವಿಭಾ ಉಮೆಯರು ನಮಸ್ಕರಿಸಿದೊಡನೆಯೇ ಹರಸಿದ. ಅವರನ್ನು ಮುಟ್ಟಲು ಹತ್ತಿರ ಬರಲಿಲ್ಲ.

"ಅಣ್ಣಾ ಮನೆಯಲ್ಲಿ ಕೂಡ್ರಲು ಸ್ಥಳವಿಲ್ಲವೇ?"

"ಹೊರಗಿನ ಕೋಣೆ ಹೊಲಸಾಗಿದೆ. ಸ್ವಚ್ಛ ಮಾಡಿಸಬೇಕು."

"ಹಾಗಾದರೆ ಈಗ ಹೋಗುತ್ತೇವೆ. ಇನ್ನು ಮುಂದೆ ಇಲ್ಲಿ ನಮ್ಮ ಆವಶ್ಯಕತೆಯಿದ್ದಂತೆ ಕಂಡುಬರುವದಿಲ್ಲ ಆದರೂ ಕುಳಿತುಕೊಳ್ಳಲು ಅನುಕೂಲಮಾಡಿಸಿದಾಗ ಹೇಳಿ ಕಳುಹಿಸು, ಬರುವೆವು "

ಶೈಲೇಶ ಏನೂ ಮಾತಾಡಲಿಲ್ಲ.

ದಾರಿಯಲ್ಲಿ ವಿಭಾಳು ಒಂದು ಮಾತನ್ನೂ ಆಡಲಿಲ್ಲ. ಆದರೆ ಎರಡೂ ಕಣ್ಣುಗಳಿಂದ ಅವಿರತವಾಗಿ ನೀರು ಸುರಿಯುತ್ತಿತ್ತು. ತಮಗೆ ಇನ್ನು

ಮುಂದೆ ಈ ಮನೆಯಲ್ಲಿ ಸ್ಥಳವಿಲ್ಲವೆಂದು ಎಲ್ಲರಿಗೂ ಅನಿಸಿತು. ಏನೇ ಆದರೂ ಸೋಮೇಂದ್ರನನ್ನು ಬಿಟ್ಟು ಬರುವದಿಲ್ಲವೆಂದು ಆಕೆ ಗಂಡನೊಡನೆ ಆಣೆ ಮಾಡಿದ್ದಳು. ಈ ಮಾತು ಇಬ್ಬರಿಗೂ ನೆನಪಾಗುತ್ತಿದ್ದರೂ ಪರಿಸ್ಥಿತಿಯನ್ನರಿತು ಯಾರ ಬಾಯಿಂದಲೂ ಈ ಮಾತು ಹೊರಬೀಳಲಿಲ್ಲ.

ಇನ್ನೂ ಒಂದು ತಿಂಗಳು ಗತಿಸಿತು, ಶೈಲೇಶನ ಸುದ್ದಿ ಊರಲ್ಲೆಲ್ಲ ಹಬ್ಬಿತು. ಈ ಸಂಗತಿ ಹೇಳುತ್ತ ಹೋದವರೆಲ್ಲ ಅದರಲ್ಲಿ ಉಪ್ಪುಕಾರ ಸೇರಿಸಲು ಮರೆಯುತ್ತಿರಲಿಲ್ಲ. ವಿಭಾಳಿಗೆ ಎಲ್ಲಿಯೂ ತಲೆಯೆತ್ತಿ ತಿರುಗಲು ಇಂಬಿಲ್ಲದಂತಾಗಿದೆ, ಪರಿಸ್ಥಿತಿ ಸುಧಾರಿಸುವ ಆಸೆ ಆಕೆಗಿಲ್ಲ. ಭಾವನಾವಶರಾದವರ ಭಾವನೆಗಳು ಕಾಲಕಳೆದಂತೆ ಶಾಂತವಾಗುತ್ತದೆಂದು ಕ್ಷೇತ್ರಮೋಹನ ಅರಿತಿದ್ದ. ಆದರಿಂದ ಅನುಕೂಲ ಸಮಯ ಬರಲಿ ಎಂದು ಕಾದಿದ್ದ. ''ಮನುಷ್ಯ ಪರಲೋಕದ ಸುಧಾರಣೆಗೆ ಒಮ್ಮೆಲೇ ಹತ್ತಿದನೆಂದರೆ ಹಾದಿಗೆ ಹತ್ತುವುದು ಕಷ್ಟ. ಅಲ್ಲದೆ ಈ ಹಾದಿಗೆ ಬಿದ್ದುದು ಉಷೆಯ ಕಾಲಗುಣ: ಈ ಕಾಲಕ್ಕೆ ಆಕೆಯೂ ಬಂದು ಸೇರಿದಳೆಂದರೆ ಗಾಳಿ ಬೆಂಕಿ ಕೂಡಿದಂತೆ.''

ಉಷೆಯೆಂದರೆ ಈಗ ಎಲ್ಲರಿಗೂ ಸಿಟ್ಟು. ಆಕೆ ಬರದಿದ್ದರೆ ಇಷ್ಟೆಲ್ಲ ಉಪದ್ವ್ಯಾಪವಾಗುತ್ತಿರಲಿಲ್ಲ ಎಂದು ಅವರ ಭಾವನೆ.

ಅಂದು ರವಿವಾರ. ಗಂಡಹೆಂಡಂದಿರಿಬ್ಬರೂ ಶೈಲೇಶನ ಬಗ್ಗೆಯೇ ಮಾತುಕತೆ ನಡೆಸಿದ್ದರು. ಶೈಲೇಶನ ಮನೆಯಿಂದ ಅಪಮಾನಿತರಾಗಿ ತಿರುಗಿ ಬಂದಂದಿನಿಂದ ಅತ್ತ ಕಣ್ಣೆತ್ತಿಯೂ ನೋಡಿರಲಿಲ್ಲ. ಆದರೆ ಅಲ್ಲಿಯ ದಿನದಿನದ ಸಮಾಚಾರ ಕಿವಿಗೆ ಬೀಳುತ್ತಿತ್ತು. ಗುರು ಶಿಷ್ಯರು ಅಲ್ಲಿಂದ ಹೊರಡುವ ಲಕ್ಷಣವಿದ್ದಿಲ್ಲ. ಗುರುಗಳ ಗದ್ದುಗೆ ಯಾವಾಗಲೂ ಮಾಳಿಗೆಯ ಮೇಲೆಯೇ, ಸಾಯಂ ಪ್ರಾತಃಕಾಲಗಳಲ್ಲಿ ನಿಯಮಿತವಾಗಿ ಹರಿಕೀರ್ತನೆ ನಡೆಯುತ್ತಿತ್ತು ಅಲ್ಲದೆ ಇಂದೊಂದು ಹೊಸ ಸಮಾಚಾರ ಗೆಳೆಯರಿಂದ ಕಿವಿಗೆ ಬಿದ್ದಿತ್ತು. ಶೈಲೇಶ ಶ್ರೀಧಾಮ ನವದ್ವೀಪದಲ್ಲಿ ಬಹಳ ಖರ್ಚು ಮಾಡಿ ಗುರುಗಳಿಗೆ ಆಶ್ರಮ ಕಟ್ಟಿಸುತ್ತಿದ್ದಾನೆಂದೂ, ಅದಕ್ಕಾಗಿ ಸಾಲಮಾಡುವವನಿದ್ದಾನೆಂದೂ ತಿಳಿದುಬಂದಿತ್ತು.

"ಈ ಸುದ್ದಿ ನಿಜವಾದರೆ ಅಣ್ಣನ ಉದ್ಧಾರಕ್ಕಾಗಿ ಇನ್ನೊಮ್ಮೆ ಯತ್ನಿಸಿ. ವೃಥಾ ಆ ಹುಡುಗ ಹಾಳಾಗಬೇಕಾದೀತು."

"ಅಯ್ಯೋ! ನಾನಾದರೂ ಏನು ಮಾಡಲಿ? ಹಾಗಾದರೆ ಇಂದೊಮ್ಮೆ ಅತ್ತ ತಿರುಗಾಡಿ ಬರೋಣ."

ವಿಭೆಗೆ ಇಂದು ನಿಜವಾಗಿಯೂ ಅಳು ಬಂದುಬಿಟ್ಟಿತ್ತು. ಈ ದುಃಖದಲ್ಲಿ ಆಕೆಯ ಮಾನ-ಅಭಿಮಾನಗಳೆಲ್ಲ ತೇಲಿಹೋಗಿದ್ದವು "ಹಾಗಾದರೆ ಹಾಗೇ ಆಗಲಿ" ಎಂದಳು.

ಅವರು ಇಂದು ಉಮೆಯನ್ನು ಕರೆದುಕೊಂಡು ಹೋಗಲಿಲ್ಲ. ಆಕೆಯ ಮುಂದೆ ಇನ್ನೊಮ್ಮೆ ನಾಚಿಕೆಗೇಡಾಗುವ ಪ್ರಸಂಗ ಬರಬಾರದೆಂದು ಹಾಗೆ ಮಾಡಿದರು. ಶೈಲೇಶನ ಮನೆಯ ಮುಂದೆ ಮೋಟರು ಹೋಗಿ ನಿಂತಾಗ ಹತ್ತು ಬಡೆದಿತ್ತು. ಹೊರಗಿನ ಕೋಣೆ ತೆರೆದಿತ್ತು. ಇಬ್ಬರೂ ಶಿಷ್ಯರು ನೆಲದ ಮೇಲೆ ಕೂತು ಗಂಟುಮೂಟೆ ಕಟ್ಟುತ್ತಿದ್ದರು.

"ಶೈಲೇಶಬಾಬು ಮನೆಯಲ್ಲಿದ್ದಾರೆಯೇ?"

"ಇಲ್ಲ. ಮೊನ್ನೆ ಅವರು ನವದ್ವೀಪಕ್ಕೆ ಹೋಗಿದ್ದಾರೆ."

"ತಿರುಗಿ ಎಂದು ಬರುವರು?"

"ನಾಳೆ ಅಥವಾ ನಾಡದು ಬೆಳಿಗ್ಗೆ"

"ಸೋಮೇಂದ್ರ ಮನೆಯಲ್ಲಿದ್ದಾನೆಯೇ?"

"ಹೂಂ" ಎಂದು ತಮ್ಮ ಕೆಲಸದಲ್ಲಿ ಮಗ್ನರಾದರು.

ಆ ಮೇಲೆ ವಿಭಾ ಕ್ಷೇತ್ರಮೋಹನರು ಮನೆಯೊಳಗೆ ಪ್ರವೇಶಿಸಿದರು. ಇಬ್ಬರೂ ಲ್ಯಾಬ್ರರಿಯ ಕೋಣೆಯೆಡೆಗೆ ನೋಡಿದರು, ಎಂದಿನಂತೆ ಪರದೆ. ಇತ್ತು. ಸಾಮಾನೆಲ್ಲ ವ್ಯವಸ್ಥಿತವಾಗಿ ಇಡಲ್ಪಟ್ಟಿತ್ತು. ಇದನ್ನೆಲ್ಲ ನೋಡಿ, ವಿಭೆಯು "ಅಣ್ಣಾ, ಅವರಿಬ್ಬರನ್ನೂ ಹೊರಹಾಕಿ ಕೋಣೆಯನ್ನು ಸ್ವಚ್ಛಗೊಳಿಸಿದಂತೆ ಕಂಡುಬರುತ್ತಿದೆ. ಇಷ್ಟಾದರೂ ಆತನಿಗೆ ಸುಬುದ್ಧಿ ಬಂದೀತೆಂದು ಭಾವಿಸಿರಲಿಲ್ಲ" ಎನ್ನುವಷ್ಟರಲ್ಲಿಯೇ ಹಿಂದಿನಿಂದೊಂದು ಶಬ್ದವನ್ನು ಕೇಳಿ ಅವರೆಲ್ಲ ಚಕಿತರಾಗಿ ನಿಂತರು.

ಸೋಮೇಂದ್ರ ಎಲ್ಲಿಯೋ ಹೊರಹೋಗಿದ್ದ. ರಬ್ಬರಿನ ಚಂಡೊಂದನ್ನು ಹಾರಿಸುತ್ತ ಬರುತ್ತಿದ್ದ. ಮಾಲೆ ಇದ್ದಿಲ್ಲ. ಹಿಂದಿನ ವೇಷವಿದ್ದಿಲ್ಲ ಬ್ರಹ್ಮ.

ಚಾರಿಯ ರೂಪೂ ಮಾಯವಾಗಿತ್ತು. ಕೆಂಪು ಅಂಚಿನ ಧೋತರ ಉಟ್ಟಿದ್ದ. ಅದಕ್ಕೆ ಜರಿಯ ನಕ್ಷೆ ಇತ್ತು. ತಲೆಯ ಕೂದಲನ್ನು ವ್ಯವಸ್ಥಿತವಾಗಿ ಕತ್ತರಿಸಿದ್ದರು. ಕಾಲಲ್ಲಿ ವಾರ್ನಿಶ ಮಾಡಿದ ಮೊಚ್ಚೆ ಇತ್ತು. ಓಡೋಡುತ್ತ ಬಂದು ವಿಭೆಗೆ ಅಪ್ಪಿಕೊಂಡ. "ಅತ್ತೇ, ಅಮ್ಮ ಬಂದಿದ್ದಾಳೆ. ಅಡಿಗೆಯ ಮನೆಯಲ್ಲಿದ್ದಾಳೆ" ಎಂದು ಸೀರೆಯ ನಿರಿಗೆಯನ್ನು ಹಿಡಿದು ಜಗ್ಗಹತ್ತಿದ.

ಮೂವರೂ ಅಡಿಗೆಯ ಮನೆಯ ಸಮೀಪಕ್ಕೆ ಬಂದರು. ಅವರು ಬಂದುದನ್ನು ನೋಡಿ ಉಷೆಯು ಕೈತೊಳೆದು ಹೊರಬಂದಳು. ಅವಳನ್ನು ಕಂಡೊಡನೆಯೇ ವಿಭಾಳು ಕಾಲ್ಮರೆಯನ್ನು ತೆಗೆದು "ಅತ್ತಿಗೇ ನೋಡಿದೆಯಾ? ಏನು ಗತಿಯಾಯಿತು?"

ಉಷೆಯು ವಿಭಾಳ ಗದ್ದವನ್ನು ಮುಟ್ಟಿ ಚುಂಬಿಸಿದಳು. "ನೋಡಿದೆಯಾ, ಮಗುವಿನ ಮೋರೆ ಕಂಡು ನನಗಂತೂ ಅಳು ಬಂದಿತು. ಮಾಲೆಯನ್ನು ಹರಿದೊಗೆದೆ, ಕ್ಷೌರಮಾಡಿಸಿ, ಧೋತರ, ಅಂಗಿ, ಕಾಲ್ಮರೆ ತೊಡಿಸಿದೆ. ಅದಕ್ಕಾಗಿ ಇಷ್ಟಾದರೂ ನೋಡುವಾ ಎಂದೆನಿಸುತ್ತದೆ. ಇರಲಿ. ನೀವೇನು ಮಾಡಿದಿರಿ?' ಎಂದು ಕ್ಷೇತ್ರಮೋಹನನ ಕಡೆಗೆ ನೋಡಿ ಕೇಳಿದಳು.

"ಸಾವಕಾಶವಾಗಿ ಎಲ್ಲವನ್ನೂ ಕೇಳುವಿಯಂತೆ. ಅದಕ್ಕೇನಷ್ಟು ಆತುರ? ಮೇಲೆ ಹೋಗಿ ಮೊದಲಿಷ್ಟು ತಿನ್ನಲು ಕೊಡು. ಇರಲಿ. ಶಿಷ್ಯರಿಬ್ಬರು ಹೊರಗೆ ಗಂಟುಕಟ್ಟುತ್ತಿದ್ದಾರೆ. ಮೇಲೆ ಗುರುಗಳು ಇಲ್ಲವಷ್ಟೆ?"

ಉಷೆಯು ನಕ್ಕಳು. "ಏನೂ ಅಂಜುವ ಕಾರಣವಿಲ್ಲ. ಅವರೆಲ್ಲ ನವದ್ವೀಪಕ್ಕೆ ತೆರಳಿದ್ದಾರೆ."

"ಹಾಗಾದರೆ ಅವರೆಂದೂ ತಿರುಗಿ ಬರಲಾರರೇ?"

"ಇಲ್ಲ."

"ಚಿಕ್ಕ, ನಿಮ್ಮಲ್ಲಿಷ್ಟು ಸುಬುದ್ಧಿಯಿದೆಯೆಂದು ನಾನು ಕನಸಿನಲ್ಲಿಯೂ ಎಣಿಸಿರಲಿಲ್ಲ."

---